## ವಿಧಿ ಮತ್ತು ಕಾರ್ಯಕರ್ಮಗಳು

ಮಾನವನು ಯಾವ ಕರ್ಮವನ್ನು ಮಾಡಿದಾಗಲೂ, ಯಾವುದಾದರೊಂದು ಫಲವನ್ನು ಕೋರಿಯೇ ಮಾಡುವನು. ಫಲದ ಆಸೆಯಿಲ್ಲದೆ ಕಾರ್ಯವನ್ನು ಮಾಡಲಿಚ್ಛಿಸುವುದಿಲ್ಲ, ಎಂದು ಹಿಂದೆಯೇ ಹೇಳಿದೆವು. ಆದರಿಂದ ಈ ಕರ್ಮಗಳೆಲ್ಲವೂ ಸಕಾಮ ಅಥವಾ ಕಾಮ್ಯ ಕರ್ಮಗಳೆನಿಸುವುವು.

ವೇದಗಳಲ್ಲಿ ಎರಡು ವಿಧವಾದ ಕರ್ಮಗಳು ಕಂಡು ಬರುವುವು ಅವು ವಿಧಿ ಮತ್ತು ಕಾಮ್ಯ ಕರ್ಮಗಳು. ಇಲ್ಲಿ ಹೇಳುವ ಕಾಮ್ಯ ಕರ್ಮಗಳು ಮೇಲೆ ಹೇಳಿದ ಸಕಾಮ ಕರ್ಮಗಳಿಗಿಂತಲೂ ಬೇರೆಯಾದದ್ದು.

## ವಿಧಿ ಕರ್ಮಗಳು

ವಿಧಿಯು ಎರಡು ವಿಧ—"ಇದಂಕುರು—ಇದಂ ಮಾ ಕುರು" ಎಂದರೆ ಇಂತಿಂಥಾ ಕರ್ಮಗಳು ಮಾಡಬೇಕಾದುವು, ಇಂತಿಂಥಾ ಕರ್ಮಗಳನ್ನು ಮಾಡಕೂಡದು ಎಂಬ ವಿಧಿ (*Musts*) ಮತ್ತು ನಿಷೇಧಗಳು (*Must-Nots*) ಎಂದು ಎರಡು ವಿಧ ಉದಾಹರಣೆಗೆ – ಸತ್ಯವನ್ನೇ ನುಡಿ, ಧರ್ಮ ಮಾರ್ಗದಲ್ಲಿ ನಡೆ, ಗುರು ಹಿರಿಯರಲ್ಲಿ ಭಕ್ತಿಯಿಂದಿರು—ಇತ್ಯಾದಿಯಾಗಿ, ಅವುಗಳನ್ನು ಆಚರಿಸಲೇಬೇಕು ಎಂದು ವಿಧಿಸುವುದು ಸುಳ್ಳು ಹೇಳುವುದು ಪರರನ್ನು ಹಿಂಸಿಸುವುದು; ಪರರಸ್ವತ್ತಿಗೆ ಆಸೆಪಡುವುದು ಇತ್ಯಾದಿಗಳು ನಿಷೇಧಿಸಲ್ಪಟ್ಟಿವೆ.

ವರ್ಣ ಧರ್ಮಗಳೆಂಬ ಕರ್ಮಗಳಲ್ಲಿ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ವರ್ಣದವರು ಆಚರಿಸ ಬೇಕಾದ ಧರ್ಮಗಳನ್ನು ವಿಧಿರೂಪದಲ್ಲಿ ಹೇಳಿರುವುದು ಅದೇ ರೀತಿಯಲ್ಲಿ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಗಳೆಂಬ ನಾಲ್ಕು ಆಶ್ರಮದವರು ಆಚರಿಸ ಬೇಕಾದ ಕರ್ಮಗಳೂ ವಿಧಿಕರ್ಮಗಳು ಇವುಗಳಲ್ಲಿ ಪ್ರತಿನಿತ್ಯವೂ ಮಾಡಬೇಕಾದ ಕರ್ಮಗಳೂ ಆಗಾಗ್ಗೆ ಪರ್ವಕಾಲಗಳಲ್ಲಿ ಮಾಡಬೇಕಾದ ಕರ್ಮಗಳೂ ಇರುವುವು ಮಾಡಬೇಕಾದ ವಿಧಿಕರ್ಮಗಳನ್ನು ಮಾಡದಿರುವುದೂ, ಮಾಡಬಾರದ್ದನ್ನು ಮಾಡುವುದೂ ಎರಡೂ ಪಾಪ ಕಾರ್ಯಗಳು.

## ಋಣತ್ರಯಗಳು

ಪ್ರತಿಮಾನವನೂ ಹುಟ್ಟುವಾಗಲೇ ಮೂರು ವಿಧವಾದ ಋಣಗಳೊಡನೆ ಎಂದರೆ ಸಾಲಗಳೊಡನೆ ಹುಟ್ಟುವನು. ಅವೇ ದೇವಋಣ, ಋಷಿಋಣ ಮತ್ತು ಪಿತೃಋಣ.

## ದೇವಋಣ

ಶ್ರುತಿಪ್ರಮಾಣ ರೀತ್ಯಾ ದೇವತೆಗಳು ಮನುಷ್ಯರ ಇಂದ್ರಿಯಗಳಲ್ಲಿ ತಮ್ಮ ಅಂಶದಿಂದ ವಾಸಿಸುತ್ತಾ ಅವುಗಳನ್ನು ಪಾಲಿಸುತ್ತಿರುವರು. ಸೃಷ್ಟಿಸಿದಾಗ ಅವರನ್ನು ದೇವಲೋಕದಲ್ಲಿ ವಾಸಿಸುವಂತೆ ಏರ್ಪಡಿಸಿ, ಅದರಜೊತೆಗೆ ಮನುಷ್ಯರ ಶರೀರಗಳಲ್ಲೂ ಅವರಿಗೆ ಸ್ಥಾನಗಳನ್ನು ಕಲ್ಪಿಸಿ ಅಲ್ಲೂ ಇದ್ದು ಮಾನವರಿಗೆ ಶ್ರೇಯಸ್ಸನ್ನುಂಟು ಮಾಡುತ್ತಿರಬೇಕೆಂದು ನಿಯಮಿಸಿದುದಾಗಿ ಶ್ರುತಿಗಳಲ್ಲಿ ಹೇಳಿದೆ. ಆ ನಿಯಮದಂತೆ ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್ – ವಾಯುಃ ಪ್ರಾಣೋಭೂತ್ವಾ ನಾಸಿಕೇ ಪ್ರಾವಿಶತ –ಆದಿತ್ಯಃ ಚಕ್ಷುರ್ಭೂತ್ವಾಕ್ಷಿಣೀ ಪ್ರಾವಿಶತ್-ದಿಶಃ ಶ್ರೋತ್ರಂ ಭೂತ್ವಾ ಕರ್ಣೌ ಪ್ರಾವಿಶತ್ ...ಐ ಉ 2-3 ಎಂದರೆ—ವಾಕ್ಕಿಗೆ ಅಭಿಮಾನ ದೇವತೆಯಾದ ಅಗ್ನಿಯು ವಾಕ್ಕಾಗಿ ಮುಖವನ್ನು ಪ್ರವೇಶಿಸಿದನು. ಚಕ್ಷುರಭಿಮಾನ ದೇವತೆಯಾದ ಸೂರ್ಯನು ಕಣ್ಣುಗಳಲ್ಲಿ ಪ್ರವೇಶಿಸಿದನು. ಶ್ರೋತ್ರಾಭಿಮಾನಿಯಾದ ದಿಕ್ಕುಗಳು ಶ್ರೋತ್ರಗಳಾಗಿ ಕಿವಿಯನ್ನು ಪ್ರವೇಶಿಸಿವು ಮನಸ್ಸಿಗೆ ಅಭಿಮಾನ ದೇವತೆಯಾದ ಚಂದ್ರನು ಮನಸ್ಸಿನಲ್ಲಿ ಪ್ರವೇಶಿಸಿದನು—ಇತ್ಯಾದಿಯಾಗಿ ದೇವತೆಗಳ ಅಂಶವು ಮನುಷ್ಯನ ಶರೀರಗಳಲ್ಲಿ ಪ್ರತಿಷ್ಠಿತವಾಗಿದ್ದು ಆಯಾ ಇಂದ್ರಿಯಗಳಿಗೆ ಅಭಿಮಾನದೇವತೆಗಳಾಗಿರುವರು. ಸೂರ್ಯನು ಬುದ್ಧಿಗೆ ಅಧಿದೇವತೆಯೆನ್ನುವರು ಸೂರ್ಯನು ಮಳೆಗೂ ಬೆಳೆಗೂ ಕಾರಣವಾಗಿರುವುದರಿಂದ ಮನುಷ್ಯನು ಭುಜಿಸುವ ಅನ್ನಕ್ಕೆ ಸೂರ್ಯನು ಕಾರಣ. ಈ ಕಾರಣಗಳಿಂದಾಗಿ ಮನುಷ್ಯನ ದೇವತೆಗಳಿಗೆ ಋಣಪಟ್ಟಿರುವನು. ಆದರಿಂದಲೆ ಮಾನವರು ದೇವತೆಗಳನ್ನು ಆರಾಧಿಸಿ ತಮ್ಮ ಋಣವನ್ನು ತೀರಿಸಿಕೊಳ್ಳಬೇಕು. ತ್ರೈವರ್ಣಿಕರು ತಮ್ಮ ನಿತ್ಯ ಸಂಧ್ಯಾವಂದನಾದಿ ಕರ್ಮಗಳಿಂದ ಸೂರ್ಯ, ಇಂದ್ರ, ವರುಣ ಇತ್ಯಾದಿ ದೇವತೆಗಳನ್ನು ಆರಾಧಿಸಿ ಸ್ತೋತ್ರ ಮಾಡಬೇಕೆಂದು ವಿಧಿಸಿರುವುದು ಆ ಸ್ತೋತ್ರ ರೂಪವಾದ ಮಂತ್ರಗಳೆಲ್ಲವೂ ಅವರವರ ನಿತ್ಯ ಕರ್ಮಗಳಲ್ಲಿರುವುವು ಶೂದ್ರರಿಗೆ ಈ ನಿತ್ಯ ಕರ್ಮಗಳಿಲ್ಲದಿದ್ದರೂ ಚಾತುರ್ವರ್ಣ್ಯ ನಿಯಮದಂತೆ ಶೂದ್ರರು ತ್ರೈವರ್ಣಿಕರ ಸೇವೆ ಮಾಡುವುದರಿಂದ ಇವರ ನಿತ್ಯ ಕರ್ಮಗಳ ಫಲದಲ್ಲಿ ಒಂದು ಭಾಗವು ಶೂದ್ರರಿಗೆ ಸೇರಿ ಅವರ ಋಣವೂ ತೀರುವುದು.

## ಋಷಿಋಣ

ಮಾನವನ ಉಜ್ಜೀವನಕ್ಕಾಗಿ ಮಹರ್ಷಿಗಳು ತಪಸ್ಸನ್ನಾಚರಿಸಿ ಮಾನವರ ಲೌಕಿಕ ರಾಜಕೀಯ ಆರ್ಥಿಕ, ಸಾಮಾಜಿಕ, ಆಧ್ಯಾತ್ಮಿಕ ವಿದ್ಯೆಗಳನ್ನು ಕಂಡು ಹಿಡಿದು ತಮ್ಮ ಅನುಭವಗಳ ಮೂಲಕ ಅವುಗಳನ್ನು ತಿದ್ದಿ ಸಾಧಿಸಿ ತಮ್ಮ ಅಭ್ಯುದಯಕ್ಕಾಗಿ ಅನುಗ್ರಹಿಸಿ ಕೊಟ್ಟಿರುವರು. ನಿತ್ಯ ಸಂಧ್ಯಾವಂದನಾದಿ ಕರ್ಮವನ್ನು ಆಚರಿಸುವವರು ತಾವು ಯಾವಯಾವ ಋಷಿಗಳ ವಂಶದಲ್ಲಿ ಜನಿಸಿರುವರೆಂಬುದನ್ನು ಅರಿತಿರುವರು ಅವರು ಅನುಗ್ರಹಿಸಿ ಕೊಟ್ಟಿರುವ ಉಪದೇಶಗಳಿಗನುಸಾರವಾಗಿ ನಾವು ನಡೆದುಕೊಂಡು ಧರ್ಮಾಚರಣೆಯನ್ನೂ ಕರ್ಮಾಚರಣೆಯನ್ನು ಆಚರಿಸಿದಾಗಲೇ ಋಷಿಋಣವು ತೀರುವುದು. ಮಹರ್ಷಿಗಳು ನಮಗಾಗಿ ಅನುಗ್ರಹಿಸಿಕೊಟ್ಟಿರುವ ಆಧ್ಯಾತ್ಮ ವಿದ್ಯೆಯನ್ನು ಅಭ್ಯಾಸ ಮಾಡಿದಾಗಲೆ ಋಷಿಯ ಋಣ ತೀರುವುದು.

## ಪಿತೃಋಣ

ಎಂಬುವುದು ಮಾತಾ ಪಿತೃಗಳಿಗೆ ತೀರಿಸ ಬೇಕಾದ ಋಣ. ತನ್ನ ಶರೀರವು ತನ್ನ ತಂದೆ ತಾಯಿಗಳ ರಕ್ತದಿಂದಲುಂಟಾಗಿರುವುದು ಎಲ್ಲರಿಗೂ ತಿಳಿದ ವಿಷಯ ಈ ರಕ್ತವೂ ತನ್ನ ಪೂರ್ವಿಕರಾದ ಮಹನೀಯರ ವಂಶ ಪಾರಂಪರ್ಯವಾಗಿ ಬಂದಿರುವುದು. ಪಿತೃಋಣವು ತನ್ನ ತಂದೆ ತಾಯಿಗಳನ್ನು ಗೌರವಿಸಿ ತನ್ನ ಕೈಲಾದಷ್ಟು ಅವರನ್ನು ಸುಖವಾಗಿರುವಂತೆ ನೋಡಿ ಕೊಳ್ಳುವುದರಿಂದ ತೀರುವುದು. ಮಾತಾಪಿತೃಗಳು ಮರಣ ಹೊಂದಿದ ನಂತರ ಶಾಸ್ತ್ರ ರೀತ್ಯಾ ಪರ್ವಕಾಲಗಳಲ್ಲಿ ಶ್ರಾದ್ಧಾದಿ ಕರ್ಮಗಳನ್ನು ನೆರವೇರಿಸುವುದರಿಂದ ತೀರುವುದು.

ಈ ಋಣಗಳನ್ನು ತೀರಿಸದಿದ್ದರೆ ಬಡ್ಡಿಗೆ ಬಡ್ಡಿಯಂತೆ ಸೇರಿ ಹೆಚ್ಚಿ ಕೊಂಡು 'ಪುನರಪಿ ಜನನಂ ಪುನರಪಿ ಮರಣಂ' ಎಂಬಂತೆ ಅನೇಕ ಜನ್ಮಗಳನ್ನು ಎತ್ತುವುದಕ್ಕೆ ಇದೂ ಒಂದು ಕಾರಣವಾಗುವುದು.

ಇಲ್ಲಿ ಎರಡು ವಿಧವಾದ ಪ್ರಶ್ನೆಗಳು ಏಳಬಹುದು (1) ಸತ್ತು ಹೋದ ತಂದೆ ತಾಯಿಯರ ಹೆಸರಿನಲ್ಲಿ ನಾವು ಶ್ರಾದ್ಧ ಮಾಡಿದರೆ ಅದರಿಂದ ಅವರಿಗೆ ತೃಪ್ತಿಯಾಗುವುದೇ? ಅವರು ಆಗಲೇ ಬೇರೆ ಎಲ್ಲಾದರೂ ಹುಟ್ಟಿರಬಹುದು. ಹಾಗೆ ಹುಟ್ಟಿದವರ ತೃಪ್ತಿಗಾಗಿ ಈಗ ನಾವು ಶ್ರಾದ್ಧ ಮಾಡಬೇಕೆ? (2) ಎರಡನೆಯದಾಗಿ ಭಾರತದೇಶದಲ್ಲಿರುವ ಪಾಶ್ಚಾತ್ಯರಿಗೂ ಇತರ ದೇಶೀಯರಿಗೂ ಈ ವಿಧವಾದ ಕರ್ಮಗಳಿಲ್ಲವಲ್ಲ. ಭಾರತೀಯರಾದ ನಮಗೆ ಮಾತ್ರ ಯಾತಕ್ಕೆ ಈ ಕರ್ಮಗಳು ವಿಧಿಸಲ್ಪಟ್ಟಿರುವುವು? ಎಂದು ಕೇಳಬಹುದು. ಇವುಗಳ ತತ್ತ್ವವನ್ನು ಭಾರತೀಯರಾದ ನಾವು ಸ್ವಲ್ಪಮಟ್ಟಿಗೆ ಅರಿಯುವುದು ಅವಶ್ಯಕ

ಪಿತೃ ಋಣವೆಂಬುವುದು ಆಯಾವ್ಯಕ್ತಿಯು ವ್ಯಕ್ತಿಯ ಮೇಲೆ ಹೊರಿಸಿರುವ ಸಾಲ. ಆದರಿಂದಲೇ ಅದನ್ನು ಋಣವೆನ್ನುವರು. ಜೀವಿಸಿರುವ ವ್ಯಕ್ತಿಯು

## ವಿಧಿ ಮತ್ತು ಕಾರ್ಯಕರ್ಮಗಳು

ಮಾನವನು ಯಾವ ಕರ್ಮವನು ಮಾಡಿದಾಗಲೂ, ಯಾವುದಾದರೊಂದು ಫಲವನ್ನು ಕೋರಿಯೇ ಮಾಡುವನು. ಫಲದ ಆಸೆಯಿಲ್ಲದೆ ಕಾರ್ಯವನ್ನು ಮಾಡಲಿಚ್ಛಿಸುವುದಿಲ್ಲ, ಎಂದು ಹಿಂದೆಯೇ ಹೇಳಿದೆವು. ಆದರಿಂದ ಈ ಕರ್ಮಗಳೆಲ್ಲವೂ ಸಕಾಮ ಅಥವಾ ಕಾಮ್ಯ ಕರ್ಮಗಳೆನಿಸುವುವು.

ವೇದಗಳಲ್ಲಿ ಎರಡು ವಿಧವಾದ ಕರ್ಮಗಳು ಕಂಡುಬರುವುವು ಅವು ವಿಧಿ ಮತ್ತು ಕಾಮ್ಯ ಕರ್ಮಗಳು. ಇಲ್ಲಿ ಹೇಳುವ ಕಾಮ್ಯ ಕರ್ಮಗಳು ಮೇಲೆ ಹೇಳಿದ ಸಕಾಮ ಕರ್ಮಗಳಿಗಿಂತಲೂ ಬೇರೆಯಾದದ್ದು.

## ವಿಧಿ ಕರ್ಮಗಳು

ವಿಧಿಯು ಎರಡು ವಿಧ—"ಇದಂ ಕುರು—ಇದಂ ಮಾ ಕುರು" ಎಂದರೆ ಇಂತಿಂಥಾ ಕರ್ಮಗಳು ಮಾಡಬೇಕಾದುವು, ಇಂತಿಂಥಾ ಕರ್ಮಗಳನ್ನು ಮಾಡಕೂಡದು ಎಂದು ವಿಧಿ (*Musts*) ಮತ್ತು ನಿಷೇಧಗಳು (*Must-Nots*) ಎಂದು ಎರಡು ವಿಧ ಉದಾಹರಣೆಗೆ – ಸತ್ಯವನ್ನೇ ನುಡಿ, ಧರ್ಮಮಾರ್ಗದಲ್ಲಿ ನಡೆ, ಗುರು ಹಿರಿಯರಲ್ಲಿ ಭಕ್ತಿಯಿಂದಿರು—ಇತ್ಯಾದಿಯಾಗಿ, ಅವುಗಳನ್ನು ಆಚರಿಸಲೇಬೇಕು ಎಂದು ವಿಧಿಸುವುದು ಸುಳ್ಳು ಹೇಳುವುದು ಪರರನ್ನು ಹಿಂಸಿಸುವುದು; ಪರರಸ್ವತ್ತಿಗೆ ಆಸೆಪಡುವುದು ಇತ್ಯಾದಿಗಳು ನಿಷೇಧಿಸಲ್ಪಟ್ಟಿವೆ.

ವರ್ಣ ಧರ್ಮಗಳೆಂಬ ಕರ್ಮಗಳಲ್ಲಿ ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ವರ್ಣದವರು ಆಚರಿಸಬೇಕಾದ ಧರ್ಮಗಳನ್ನು ವಿಧಿರೂಪದಲ್ಲಿ ಹೇಳಿರುವುದು ಅದೇ ರೀತಿಯಲ್ಲಿ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸಂನ್ಯಾಸಗಳೆಂಬ ನಾಲ್ಕು ಆಶ್ರಮದವರು ಆಚರಿಸಬೇಕಾದ ಕರ್ಮಗಳೂ ವಿಧಿಕರ್ಮಗಳು ನಾವುಗಳಲ್ಲಿ ಪ್ರತಿನಿತ್ಯವೂ ಮಾಡಬೇಕಾದ ಕರ್ಮಗಳೂ ಆಗಾಗ್ಗೆ ಪರ್ವಕಾಲಗಳಲ್ಲಿ ಮಾಡಬೇಕಾದ ಕರ್ಮಗಳೂ ಇರುವುವು ಮಾಡಬೇಕಾದ ವಿಧಿಕರ್ಮಗಳನ್ನು ಮಾಡದಿರುವುದೂ, ಮಾಡಬಾರದ್ದನ್ನು ಮಾಡುವುದೂ ಎರಡೂ ಪಾಪಕಾರ್ಯಗಳು.

## ಋಣತ್ರಯಗಳು

ಪ್ರತಿಮಾನವನೂ ಹುಟ್ಟುವಾಗಲೇ ಮೂರು ವಿಧವಾದ ಋಣಗಳೊಡನೆ ಎಂದರೆ ಸಾಲಗಳೊಡನೆ ಹುಟ್ಟುವನು. ಅವೇ ದೇವಋಣ, ಋಷಿಋಣ ಮತ್ತು ಪಿತೃಋಣ.

## ದೇವಋಣ

ಶ್ರುತಿಪ್ರಮಾಣ ರೀತ್ಯಾ ದೇವತೆಗಳು ಮನುಷ್ಯರ ಇಂದ್ರಿಯಗಳಲ್ಲಿ ತಮ್ಮ ಅಂಶದಿಂದ ವಾಸಿಸುತ್ತಾ ಅವುಗಳನ್ನು ಪಾಲಿಸುತ್ತಿರುವರು. ಸೃಷ್ಟಿಸಿದಾಗ ಅವರನ್ನು ದೇವಲೋಕದಲ್ಲಿ ವಾಸಿಸುವಂತೆ ಏರ್ಪಡಿಸಿ, ಅದರಜೊತೆಗೆ ಮನುಷ್ಯರ ಶರೀರಗಳಲ್ಲೂ ಅವರಿಗೆ ಸ್ಥಾನಗಳನ್ನು ಕಲ್ಪಿಸಿ ಅಲ್ಲೂ ಇದ್ದು ಮಾನವರಿಗೆ ಶ್ರೇಯಸ್ಸನ್ನುಂಟುಮಾಡುತ್ತಿರಬೇಕೆಂದು ನಿಯಮಿಸಿದುದಾಗಿ ಶ್ರುತಿಗಳಲ್ಲಿ ಹೇಳಿದೆ. ಆ ನಿಯಮದಂತೆ ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್ – ವಾಯುಃ ಪ್ರಾಣೋಭೂತ್ವಾ ನಾಸಿಕೇ ಪ್ರಾವಿಶತ –ಆದಿತ್ಯಃ ಚಕ್ಷುರ್ಭೂತ್ವಾಕ್ಷಿಣೀ ಪ್ರಾವಿಶತ್-ದಿಶಃ ಶ್ರೋತ್ರಂ ಭೂತ್ವಾ ಕರ್ಣೌ ಪ್ರಾವಿಶನ್ ...ಐಉ 2-3 ಎಂದರೆ—ವಾಕ್ಕಿಗೆ ಅಭಿಮಾನ ದೇವತೆಯಾದ ಅಗ್ನಿಯು ವಾಕ್ಕಾಗಿ ಮುಖವನ್ನು ಪ್ರವೇಶಿಸಿದನು. ಚಕ್ಷುರಭಿಮಾನ ದೇವತೆಯಾದ ಸೂರ್ಯನು ಕಣ್ಣುಗಳಲ್ಲಿ ಪ್ರವೇಶಿಸಿದನು. ಶ್ರೋತ್ರಾಭಿಮಾನಿಯಾದ ದಿಕ್ಕುಗಳು ಶ್ರೋತ್ರಗಳಾಗಿ ಕಿವಿಯನ್ನು ಪ್ರವೇಶಿಸಿದವು ಮನಸ್ಸಿಗೆ ಅಭಿಮಾನ ದೇವತೆಯಾದ ಚಂದ್ರನು ಮನಸ್ಸಿನಲ್ಲಿ ಪ್ರವೇಶಿಸಿದನು—ಇತ್ಯಾದಿಯಾಗಿ ದೇವತೆಗಳ ಅಂಶವು ಮನುಷ್ಯನ ಶರೀರಗಳಲ್ಲಿ ಪ್ರತಿಷ್ಠಿತವಾಗಿದ್ದು ಆಯಾ ಇಂದ್ರಿಯಗಳಿಗೆ ಅಭಿಮಾನದೇವತೆಗಳಾಗಿರುವರು. ಸೂರ್ಯನು ಬುದ್ಧಿಗೆ ಅಧಿದೇವತೆಯೆನ್ನುವರು ಸೂರ್ಯನು ಮಳೆಗೂ ಬೆಳೆಗೂ ಕಾರಣವಾಗಿರುವುದರಿಂದ ಮನುಷ್ಯನು ಭುಜಿಸುವ ಅನ್ನಕ್ಕೆ ಸೂರ್ಯನು ಕಾರಣ. ಈ ಕಾರಣಗಳಿಂದಾಗಿ ಮನುಷ್ಯನ ದೇವತೆಗಳಿಗೆ ಋಣಪಟ್ಟಿರುವನು. ಆದರಿಂದಲೆ ಮಾನವರು ದೇವತೆಗಳನ್ನು ಆರಾಧಿಸಿ ತಮ್ಮ ಋಣವನು ತೀರಿಸಿಕೊಳ್ಳಬೇಕು. ತ್ರೈವರ್ಣಿಕರು ತಮ್ಮ ನಿತ್ಯ ಸಂಧ್ಯಾವಂದನಾದಿ ಕರ್ಮಗಳಿಂದ ಸೂರ್ಯ, ಇಂದ್ರ, ವರುಣ ಇತ್ಯಾದಿ ದೇವತೆಗಳನ್ನು ಆರಾಧಿಸಿ ಸ್ತೋತ್ರ ಮಾಡಬೇಕೆಂದು ವಿಧಿಸಿರುವುದು ಆ ಸ್ತೋತ್ರ ರೂಪವಾದ ಮಂತ್ರಗಳೆಲ್ಲವೂ ಅವರವರ ನಿತ್ಯ ಕರ್ಮಗಳಲ್ಲಿರುವುವು ಶೂದ್ರರಿಗೆ ಈ ನಿತ್ಯ ಕರ್ಮಗಳಿಲ್ಲದಿದ್ದರೂ ಚಾತುರ್ವರ್ಣನಿಯಮದಂತೆ ಶೂದ್ರರು ತ್ರೈವರ್ಣಿಕರ ಸೇವೆ ಮಾಡುವುದರಿಂದ ಇವರ ನಿತ್ಯ ಕರ್ಮಗಳ ಫಲದಲ್ಲಿ ಒಂದು ಭಾಗವು ಶೂದ್ರರಿಗೆ ಸೇರಿ ಅವರ ಋಣವೂ ತೀರುವುದು.

## ಋಷಿಋಣ

ಮಾನವನ ಉಜ್ಜೀವನಕ್ಕಾಗಿ ಮಹರ್ಷಿಗಳು ತಪಸ್ಸನ್ನಾಚರಿಸಿ ಮಾನವರ ಲೌಕಿಕ ರಾಜಕೀಯ ಆರ್ಥಿಕ, ಸಾಮಾಜಿಕ, ಆಧ್ಯಾತ್ಮಿಕ ವಿದ್ಯೆಗಳನ್ನು ಕಂಡುಹಿಡಿದು ತಮ್ಮ ಅನುಭವಗಳ ಮೂಲಕ ಅವುಗಳನ್ನು ತಿಳಿಸಿ ನಮ್ಮ ಅಭ್ಯುದಯಕ್ಕಾಗಿ ಅನುಗ್ರಹಿಸಿ ಕೊಟ್ಟಿರುವರು. ನಿತ್ಯ ಸಂಧ್ಯಾವಂದನಾದಿ ಕರ್ಮವನು ಆಚರಿಸುವವರು ತಾವು ಯಾವ ಋಷಿಗಳ ವಂಶದಲ್ಲಿ ಜನಿಸಿರುವರೆಂಬುದನ್ನು ಅರಿತಿರುವರು ಅವರು ಅನುಗ್ರಹಿಸಿ ಕೊಟ್ಟಿರುವ ಉಪದೇಶಗಳಿಗನುವಾಗಿ ನಾವು ನಡೆದುಕೊಂಡು ಧರ್ಮಾಚರಣೆಯನ್ನೂ ಕರ್ಮಾಚರಣೆಯನ್ನು ಆಚರಿಸಿದಾಗಲೇ ಋಷಿಋಣವು ತೀರುವುದು. ಮಹರ್ಷಿಗಳು ನಮಗಾಗಿ ಅನುಗ್ರಹಿಸಿಕೊಟ್ಟಿರುವ ಆಧ್ಯಾತ್ಮ ವಿದ್ಯೆಯನ್ನು ಅಭ್ಯಾಸ ಮಾಡಿದಾಗಲೆ ಋಷಿಋಣ ತೀರುವುದು.

## ಪಿತೃಋಣ

ಎಂಬುವುದು ಮಾತಾಪಿತೃಗಳಿಗೆ ತೀರಿಸಬೇಕಾದ ಋಣ. ತನ್ನ ಶರೀರವು ತನ್ನ ತಂದೆ ತಾಯಿಗಳ ರಕ್ತದಿಂದಉಂಟಾಗಿರುವುದು ಎಲ್ಲರಿಗೂ ತಿಳಿದ ವಿಷಯ ಈ ರಕ್ತವೂ ತನ್ನ ಪೂರ್ವಿಕರಾದ ಮಹನೀಯರ ವಂಶ ಪಾರಂಪರ್ಯವಾಗಿ ಬಂದಿರುವುದು. ಪಿತೃಋಣವು ತನ್ನ ತಂದೆ ತಾಯಿಗಳನ್ನು ಗೌರವಿಸಿ ತನ್ನ ಕೈಲಾದಷ್ಟು ಅವರನ್ನು ಸುಖವಾಗಿರುವಂತೆ ನೋಡಿಕೊಳ್ಳುವುದರಿಂದ ತೀರುವುದು. ಮಾತಾಪಿತೃಗಳು ಮರಣ ಹೊಂದಿದ ನಂತರ ಶಾಸ್ತ್ರ ರೀತ್ಯಾ ಪರ್ವಕಾಲಗಳಲ್ಲಿ ಶ್ರಾದ್ಧಾದಿ ಕರ್ಮಗಳನ್ನು ನೆರವೇರಿಸುವುದರಿಂದ ತೀರುವುದು.

ಈ ಋಣಗಳನ್ನು ತೀರಿಸದಿದ್ದರೆ ಬಡ್ಡಿಗೆ ಬಡ್ಡಿಯು ಸೇರಿ ಹೆಚ್ಚುಕೊಂಡು 'ಪುನರಪಿ ಜನನಂ ಪುನರಪಿ ಮರಣಂ' ಎಂಬಂತೆ ಅನೇಕ ಜನ್ಮಗಳನ್ನು ಎತ್ತುವುದಕ್ಕೆ ಇದೂ ಒಂದು ಕಾರಣವಾಗುವುದು.

ಇಲ್ಲಿ ಎರಡು ವಿಧವಾದ ಪ್ರಶ್ನೆಗಳು ಏಳಬಹುದು (1) ಸತ್ತು ಹೋದ ತಂದೆ ತಾಯಿಯರ ಹೆಸರಿನಲ್ಲಿ ನಾವು ಶ್ರಾದ್ಧ ಮಾಡಿದರೆ ಅದರಿಂದ ಅವರಿಗೆ ತೃಪ್ತಿಯಾಗುವುದೇ? ಅವರು ಆಗಲೇ ಬೇರೆ ಎಲ್ಲಾದರೂ ಹುಟ್ಟಿರಬಹುದು, ಹಾಗೆ ಹುಟ್ಟಿದವರ ತೃಪ್ತಿಗಾಗಿ ಈಗ ನಾವು ಶ್ರಾದ್ಧ ಮಾಡಬೇಕೆ? (2) ಎರಡನೆಯದಾಗಿ ಭಾರತದೇಶದ ಹೊರಗಿರುವ ಪಾಶ್ಚಾತ್ಯರಿಗೂ ಇತರ ದೇಶೀಯರಿಗೂ ಈ ವಿಧವಾದ ಕರ್ಮಗಳಿಲ್ಲವಲ್ಲ. ಭಾರತೀಯರಾದ ನಮಗೆ ಮಾತ್ರ ಯಾತಕ್ಕೆ ಈ ಕರ್ಮಗಳು ವಿಧಿಸಲ್ಪಟ್ಟಿರುವುವು? ಎಂದು ಕೇಳಬಹುದು. ಇವುಗಳ ತತ್ತ್ವವನ್ನು ಭಾರತೀಯರಾದ ನಾವು ಸ್ವಲ್ಪಮಟ್ಟಿಗೆ ಅರಿಯುವುದು ಅವಶ್ಯಕ

ಪಿತೃ ಋಣವೆಂಬುವುದು ಆಯಾ ವ್ಯಕ್ತಿಯು ವ್ಯಕ್ತಿಯ ಮೇಲೆ ಹೊರಿಸಿರುವ ಸಾಲ. ಆದರಿಂದಲೇ ಅದನ್ನು ಋಣವೆನ್ನುವರು. ಜೀವಿಸಿರುವ ವ್ಯಕ್ತಿಯು

# ಶ್ರೀ ಗುರುಜಗನ್ನಾಥದಾಸರ ಕೃತಿಗಳು

ರಾಗ – ಪೂರ್ವಿ　　　　ತಾಳ – ತ್ರಿವಿಡಿ

ಎನ್ನ ಮೊರೆಯು ಕೇಳಬಾರದೆ ಹೇ ಶ್ರೀನಿವಾಸ

F 3 P

ಎನ್ನಮೊರೆಯು ಕೇಳದಿರೆ ಎನ್ನನಿವರು ಬದುಕಿಸರು
ಇನ್ನುಮಾಡಲೇನು ಎಂದು ನಿನ್ನ ಪಡಕೆ ಸಾರಿದೆನು ॥ ಅ.ಪ. ॥

ಇಬ್ಬರ್ರಮಣ ನಿನ್ನ ಪಾದ ಉಬ್ಬಿಮನದಿ ಭಜಿಪ ಎನಗೆ
ಮಬ್ಬುಗವಿಸಿ ತಾವು ಎನ್ನ ಮೊಬ್ಬಿನೊಳಗೆ ಕೆಡವಿದರೊ ॥೧॥

ಅನ್ಯವಾರ್ತೆಬಿಟ್ಟು ನಾನು ನಿನ್ನಗುಣವ ಕೇಳ್ವೆನೆನಲು
ನಿನ್ನವಾರ್ತೆ ಬಿಡಿಸಿ ತಾವು ಅನ್ಯವಾರ್ತೆ ಕೇಳಿಸೋರು ॥೨॥

ನಿನ್ನ ನಾಮಸ್ತೋತ್ರಗಳು ಮನ್ನದಿಂದ ಜರಿಪೆನೆನಲು
ಎನ್ನಮಾತು ಸಾಗಗೊಡದ ತಮ್ಮಮಾತು ಸಾಗಿಸುವರು ॥೩॥

ನಿನ್ನ ಪಾದಕಮಲಗಂಧವನ್ನು ಗ್ರಹಿಪೆನೆನಲು ಎನಗೆ
ಚೆನ್ನಗಂಧ ಬಿಡಿಸಿ ತಾವು ಘನ್ನದುರ್ಗಂಧ ಕೊಡುವರೋ ॥೪॥

ನಿನ್ನ ಭಜಕರಂಗಸಂಗವನ್ನು ಮಾಳ್ಪೆನೆನಲು ಅದ
ನನ್ನು ಬಿಡಿಸಿ ಪರನಾದ ವನ್ನುತೀರ ಕೂಡಿಸೋರು ॥೫॥

ನಿನ್ನ ಚಕ್ರಶಿಲಾಸ್ಪರ್ಶವನ್ನು ಮಾಳ್ಪೆನೆನಲು ಅದ
ನನ್ನು ಬಿಡಿಸಿ ನೀಚಜನರನ್ನು ಸ್ಪರ್ಶ ಮಾಡಿಸೋರು ॥೬॥

ನಿನ್ನ ಮನೆಗೆ ಬರುವ ಎನ್ನ ಚೆನ್ನವಾಗಿ ಕರೆದು ತಾವು
ಅನ್ಯಮನೆಗೆ ಪೈದು ಬಹಳ ಬನ್ನಬಡಿಸಿಬಿಡುವರಯ್ಯಾ ॥೭॥

ಅನ್ಯಮನೆಗೆ ಪೋಗದಲೆ ಎನ್ನ ಮನೆಯು ಒಳಗೆ ನಾನು
ಅನ್ನವಸನದಿಂದ ಇರಲು ಅನ್ಯಸದನಕೆಳೆಯು ಒಯ್ವರು ॥೮॥

ಕಠಿಣಜನರು ಅವರು ಬಹಳ ಸಟೆಯು ಅಲ್ಲವೆನ್ನ ಮಾತು
ಘಟನೆ ಗುರುಜಗನ್ನಾಥವಿಠಲರೇಯ ಲಾಲಿಸೀಗ ॥೯॥



ಶ್ರೀ ಗುರುಜಗನ್ನಾಥದಾಸರು ಕೌತಾಳದಲ್ಲಿ ಜೀವಿಸಿದ್ದ ಹಿರಿಯ ಸಂತರು. ಕೋಸಿಗಿ ಮುತ್ತು ಎಂದೇ ಪ್ರಸಿದ್ಧರಾದ ಈ ಹರಿದಾಸರು ಹಲವು ಹನ್ನೊಂದು ಸಂಸ್ಕೃತ, ಕನ್ನಡ ಕೃತಿಗಳನ್ನು ರಚಿಸಿ, ಧರ್ಮಪ್ರಸಾರ ಮಾಡಿದವರು. ಅವರ ಕನ್ನಡದ ಕೀರ್ತನೆಗಳನ್ನು ಸಂಗ್ರಹಿಸಿ ಸಂಪಾದಿಸಿ ತಿ.ತಿ.ದೇ. ಪ್ರಕಟಿಸಿದೆ. ಶ್ರೀ ಕೆ. ಅಪ್ಪಣ್ಣಾಚಾರ್ಯರಿಂದ ಸಂಪಾದಿತವಾದ ಈ ಕೃತಿಯ ಬೆಲೆ ರೂ. 8–40 ಮಾತ್ರ. ಆ ಪುಸ್ತಕದಿಂದ ಆಯ್ದ ಎರಡು ಕೃತಿಗಳನ್ನು ಇಲ್ಲಿ ದಾಸರ ನೆನಪಿನಲ್ಲಿ ಸಾದರ ಪಡಿಸಲಾಗಿದೆ–ಸಂ.

ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ

# ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ ತಿ ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

ಇದು ಪ್ರತಿಯೊಂದರಲ್ಲೂ [illegible]0 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14′×18′ ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.

ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು

## ಸಪ್ತಗಿರಿ ಧರ್ಮಶಾಲೆ

8 5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ ಕೈಗೊಂಡಿದೆ ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

ಎ. ಟಿ ಸಿ. ಕಾಟೇಜುಗಳು ಹಾಗೂ ಎಂ. ಬಿ. ಸಿ ಕಾಟೇಜುಗಳಲ್ಲಿನ ಮೇಲಂತಸ್ತು ಕೋಣೆಗಳಿಗೂ ಇದೇ ರೀತಿ ದಾನಗಳನ್ನು ನೀಡಬಹುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಲಾಗುವುದು.

ತಿ ತಿ.ದೇ ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

ರಾಗ – ಮೋಹನ    ತಾಳ – ಆದಿ

ಬಾರಯ್ಯಾ ವೇಂಕಟ ಮನ್ಮನಕೆ
ತ್ವರಿತದಿ ನಿಜನಾರೀಸಹಿತದಿ ಈ ಸಮಯಕೆ
ಶರಣೆಂಬೆನು ಪದಯುಗಕೆ ‖ ಪ ‖

ಸಾರಿದ ನಿಜಶರಣನ ಈ ಭವಭವ
ಘೋರಭಯವ ಪರಿಹರಿಸುವುದಕ್ಕೆ ‖ ಅ. ಪ. ‖

ವ್ಯಕ್ತಾವ್ಯಕ್ತ ತ್ರಿಜಗದ್ವ್ಯಾಪ್ತಾ
ದೋಷ ನಿರ್ಲಿಪ್ತಾ ।
ಮುಕ್ತಾಮುಕ್ತ ಜೀವರ ಗಣದಾಪ್ತಾ
ನೀ ಸರ್ವತ್ರದಿ ವ್ಯಾಪ್ತ ।
ಭಕ್ತನ ಹೃದಯದಿ ವ್ಯಕ್ತನಾಗಿ ನಿಜ
ಮುಕ್ತಿಪಥವ ತೋರೊ ಭಕ್ತಿಯನಿತ್ತು ‖ ೧ ‖

ಆನಂದನಿಲಯಾ ನಿರ್ಮಲಕಾಯಾ
ಕವಿಜನಗೇಯಾ
ಆನಂದದಾಯಕ ನಿರ್ಜಿತಮಾಯಾ
ಕಾಯಯ್ಯಾ ಜೀಯಾ
ಅನತಜನಸನ್ಮಾನದ ಮನ್ಮನ
ವನಜದಿ ನೀ ಸನ್ನಿಹಿತಾಗುವುದಕೆ ‖ ೨ ‖

ಸೋಮಾಸುರನಾಮಕ ದೈತ್ಯನ ಕೊಂದೂ
ವೇದವ ತಂದೂ
ಕೂರ್ಮ ಕಿಟ ನರಹರಿ ರೂಪದಿ ನಿಂದೂ
ವಾಮನನೆಂದೂ
ರಾಮ ಭಾರ್ಗವ ಯದುಕುಲಸಾಗರ–
ಸೋಮ ಬೌದ್ಧ ಕಲ್ಕಿ ಪ್ರೇಮದಿ ಮನಕೆ ‖ ೩ ‖

ನಿಗಮಗೋಚರ ನಿತ್ಯಾನಂದಾ
ಸುಗಮ ನಿನ್ನಿಂದಾ
ಬಗೆಬಗೆ ಜನ್ಮವನೈದಿದೆ ಮುಕುಂದಾ
ಮುಗಿವೆನೊ ಕರದಿಂದಾ
ಅಗಣಿತ ಗುಣನಿಧಿ ಸುಗಮದಿ ಭವದ
ಬಗೆಯನು ತಿಳಿಸೊ ನಗೆ ಮೊಗದಿ ಬಾ ‖ ೪ ‖

ವಿಧಿಶಂಭುವಂದಿತ ಪದಯುಗಕಮಲಾ
ನಿತ್ಯನಿರ್ಮಲಾ
ಅಧಿಭೂತಾಧ್ಯಾತ್ಮಿಕತಾಪದ ಶಮಲಾ
ನೀ ಮಾಡೆನ್ನನು ವಿಮಲಾ
ಸದಯ ಸುಧಾಕರ ಹೃದಯದಿ ತವಪದ–
ಪದುಮ ಭಜಿಪೆ ನೀ ಮುದದಲಿ ಮನಕೆ ‖ ೫ ‖

ಸಾಸಿರನಾಮ ನತಜನಪ್ರೇಮಾ
ಪೊರೆಯೋ ಶ್ರೀರಾಮಾ
ಆರ್ತಿ ಪೂರ್ತಿಸಿ ಮಾಡೆನ್ನಲಿ ಪ್ರೇಮಾ
ಸುರಸಾರ್ವಭೌಮಾ
ವಾಸಮಾಡಿ ಅಭಿಲಾಷೆಯ ಪೂರ್ತಿಸೊ
ವಾಸುದೇವ ವಾರಾಸಿಜರಮಣಾ ‖ ೬ ‖

ಶರಣಾಗತಜನಪರಿಪಾಲಾ
ಕರುಣಾಲವಾಲಾ
ಕರುಣಿಸೆನ್ನನು ಹೇ ಶ್ರೀಲೋಲಾ
ನಮಿತಜನಸುರಸಾಲ
ಶಿವ ಅಜ ಭವ ಸುರ ನಿಕರಾರ್ಚಿತಪದ
ಸರಸಿಜಯುತ ನೀ ಸುರವರದಾ ‖ ೭ ‖

ಕನಕಗಿರಿ ನಿಜಕೃತವಾಸಾ
ಪೊರೆ ಎನ್ನನು ಶ್ರೀಶಾ
ಬಿನ್ನಪ ಮಾಳ್ಪೆನು ಹೇ ಶ್ರೀನಿವಾಸಾ
ಕೊಡು ಎನಗೆ ಲೇಸಾ
ಎನ್ನ ಸಲಹೋದಕೆ ಅನ್ಯರ ಕಾಣೆನೊ
ಮನ್ನಿಸು ನೀನಾಪನ್ನಜನಸಖದಾ ‖ ೮ ‖

ಲಕ್ಷ್ಮೀನಾಯಕ ವರಪಕ್ಷಿಗಮನಾ
ಅಕ್ಷಯ ಫಲವನ್ನ
ರಕ್ಷಿಸಿ ಕಾಯುವುದೋ ನೀ ಎನ್ನ
ಲಕ್ಷ್ಮಣನಣ್ಣಾ
ಅಕ್ಷರವಿಲಕ್ಷಣ ಕರುಣ ಕ–
ಟಾಕ್ಷದಿ ಎನ್ನ ವೀಕ್ಷಿಸು ಕ್ಷಣಕ್ಷಣ ‖ ೯ ‖

ಧರ್ಮಾರ್ಥಕಾಮಮೋಕ್ಷವ ನಾನೊಲ್ಲೆ
ಕರ್ಮದ ಸುಳಿಯಲ್ಲೇ
ಮರ್ಮವ ತಿಳಿಯದ ಬೀಳುವೆ ನಾನಲ್ಲೇ
ನಿರ್ಮಿಸದಿರು ಎಲ್ಲೇ
ಕರ್ಮಭವದ ವಶ ಮಮ ಕವ [illegible]
ದುರ್ಮನ ಬಿಡಿಸೆಲೊ ಬೊಮ್ಮನ ತಾತಾ ‖ ೧೦ ‖

ದಿಟ್ಟ ಗುರು ಜಗನ್ನಾಥವಿಠಲ
ನಾಸನಾಥಾ
ಥಟ್ಟನೆ ನೀ ಎನ್ನನು ಕಾಯೋ ಶ್ರೀನಾಥಾ
ಇಷ್ಟೇ ಎನಮನದರ್ಥ
ಸೃಷ್ಟಿಯೊಳಗೆ ಬಹು ಭ್ರಷ್ಟರ ಸ್ತುತಿಸಿ ನ–
ಕೃಷ್ಟನಾದೇನೋ ಶ್ರೇಷ್ಠ ಮೂರುತೀ ‖ ೧೧ ‖



### ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ

# ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ ತಿ ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

ಇದು ಪ್ರತಿಯೊಂದರಲ್ಲೂ 50 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14'×18' ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.

ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು

## ಸಪ್ತಗಿರಿ ಧರ್ಮಶಾಲೆ

8 5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ ಕೈಗೊಂಡಿದೆ ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

ಎ. ಟಿ ಸಿ. ಕಾಟೇಜುಗಳು ಹಾಗೂ ಎಂ. ಬಿ. ಸಿ ಕಾಟೇಜುಗಳಲ್ಲಿನ ಮೇಲಂತಸ್ತು ಕೋಣೆಗಳಿಗೂ ಇದೇ ರೀತಿ ದಾನಗಳನ್ನು ನೀಡಬಹುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜು/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಲಾಗುವುದು.

ತಿ ತಿ.ದೇ ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

ಕಾರ್ಯನಿರ್ವಹಣಾಧಿಕಾರಿ
ತಿ.ತಿ. ದೇವಸ್ಥಾನಗಳು
ತಿರುಪತಿ–೫೧೭೫೦೧ ಆಂಧ್ರಪ್ರದೇಶ.

ಕಾರ್ಯನಿರ್ವಹಣಾಧಿಕಾರಿ

# ಗೊರವನಹಳ್ಳಿ ಶ್ರೀ ಲಕ್ಷ್ಮಿ

ಚರಾಚರ ವಸ್ತುಗಳಲ್ಲಿಯೂ, ತಿರ್ಯಕ್ ಜಂತುಗಳಲ್ಲಿಯೂ, ವಿಶ್ವದಾದ್ಯಂತ ವ್ಯಕ್ತ, ಅವ್ಯಕ್ತ ರೂಪವಲ್ಲಿರುವ ಸರ್ವಶಕ್ತನಾದ ಭಗವಂತ ಭಕ್ತರನ್ನು ಅನುಗ್ರಹಿಸಲು ಯಾವುದಾದರೊಂದು ಕಾರಣದ ಮೂಲಕ, ಯಾವುದಾದರೂ ರೀತಿಯಲ್ಲಿ ಕೆಲವು ಪ್ರದೇಶಗಳಲ್ಲಿ ಪ್ರಕಟಗೊಳ್ಳುವನು. ಆ ಪ್ರದೇಶಗಳೇ ಕ್ಷೇತ್ರಗಳೆಂದು ಪ್ರಸಿದ್ಧಿಯಾಗುತ್ತವೆ. ಹಾಗೆ ಶ್ರೀಲಕ್ಷ್ಮೀದೇವಿಯು ಭಕ್ತರನ್ನು ಅನುಗ್ರಹಿಸಲು ಆರಿಸಿಕೊಂಡ ತಾಣ ಗೊರವನಹಳ್ಳಿ.

ತುಮಕೂರು ಜಿಲ್ಲೆ ಕೊರಟಗೆರೆ ತಾಲ್ಲೂಕು ಗೊರವನಹಳ್ಳಿ ಗ್ರಾಮ ಚಿಕ್ಕಗ್ರಾಮ. ಇಲ್ಲಿನ ಪುರಾತನ ದೇವಸ್ಥಾನಕ್ಕೆ ಅನೇಕ ಭಕ್ತಾದಿಗಳು ಬಂದುಹೋಗುತ್ತಾ ಇದ್ದಾರೆ.

ಹಿಂದಿನಕಾಲದಲ್ಲಿ ಅರಸು ಮಕ್ಕಳು ಹೆಚ್ಚಾಗಿ ವಾಸಮಾಡುತ್ತಿದ್ದ ಈ ಹಳ್ಳಿಯಲ್ಲಿ ಅನೇಕರು ಹಣವಂತರಾಗಿದ್ದರು. ಇವರ ಜಾತಿಯಲ್ಲಿ ಒಬ್ಬ ದಟ್ಟ ದರಿದ್ರನಾದ ಸಿದ್ದಣ್ಣನವರ ಮಗ ಅಬ್ಬಯ್ಯನ ಬಳಿ ಎರಡು ಹಸುಗಳಿದ್ದವು.

ಅಬ್ಬಯ್ಯ ನಿತ್ಯವೂ ಸಗಣಿ ವಗ್ಗೈರೆಗಳನ್ನು ತಿಪ್ಪೆಯಲ್ಲಿ ಹಾಕಿ ಹತ್ತಿರದಲ್ಲೇ ಇದ್ದ ಕಟ್ಟೆಯಲ್ಲಿ ಕೈಕಾಲು ಮುಖ ತೊಳೆಯುವ ಪದ್ಧತಿ. ಒಂದು ದಿನ ಆ ಕಟ್ಟೆಯಲ್ಲಿ 'ನಾನು ನಿಮ್ಮ ಮನೆಗೆ ಬರುವೆ' ಎಂಬ ಧ್ವನಿ ಕೇಳಿಸಿತು. ಹೀಗೆಯೇ 3 ತಿಂಗಳು ಧ್ವನಿ ಕೇಳಿಸಿದ ನಂತರ ಒಂದು ದಿನ "ನಾನು ನಿಮ್ಮ ಮನೆಗೆ ಬರುತ್ತೇನೆಂದರೂ ಸುಮ್ಮನೆ ಇರುತ್ತೀಯ. ನೀನು ಮನೆಗೆ ಹೋಗುವಾಗ ಈ ಕಟ್ಟೆಯಲ್ಲಿರುವ ಜೇಡಿಮಣ್ಣನ್ನು ನಿನ್ನ ಸೆರಗಿನಲ್ಲಿ ಕಟ್ಟಿಕೊಂಡು ಹೋಗು ಜ್ಞಾಪಕ ಬರುತ್ತದೆ" ಎಂದು ಹೇಳಿದ ಹಾಗೆ ಆಯಿತು.

ಮನೆಗೆ ಬಂದ ಅಬ್ಬಯ್ಯನು ತಾಯಿಗೆ ವಿಷಯ ತಿಳಿಸಿದಾಗ ಅವನ ತಾಯಿಯು "ನೀನು ದೆವ್ವ, ಪೀಡೆ, ವಗ್ಗೈರೆ ರೂಪದಲ್ಲಿ ಬಂದರೆ ಬೇಡ. ದೇವರ ರೂಪದಲ್ಲಿ ಬಂದರೆ ಬಾ" ಎಂದು ತಿಳಿಸಲು ಹೇಳಿದಳು.

ಮೂರನೆಯ ದಿನವೂ ಅಬ್ಬಯ್ಯನು ಕಟ್ಟೆಯ ಹತ್ತಿರ ಕೈ ತೊಳೆಯಲು ಹೋದಾಗ "ನೀನು ನಿಮ್ಮ ಮನೆಯಲ್ಲಿ ಕೇಳಿಕೊಂಡು ಬಂದೆಯಾ" ಎಂದು ಕೇಳಿದ ಹಾಗಾಯಿತು. ಅದಕ್ಕೆ ಅಬ್ಬಯ್ಯನು "ನಮ್ಮ ತಾಯನ್ನು ಕೇಳಿಕೊಂಡು ಬಂದೆ, ನೀನ ಯಾವ ರೂಪದಲ್ಲಿ ಬರುತ್ತೀಯಾ" ಎಂದನು ಅದಕ್ಕೆ "ನಾನು ಲಕ್ಷ್ಮೀ ರೂಪದಲ್ಲಿ ಬರುತ್ತೇನೆ" ಎಂದು ಹೇಳಿದಂತಾಯಿತು. ತಕ್ಷಣವೇ ಸಂತೋಷದಿಂದ 'ಬಾ ಹೋಗೋಣ' ಎಂದನು. ಅದಕ್ಕೆ 'ನೀನು ಹೊದ್ದಿರುವ ಪಂಚೆಹಾಸು' ಎಂದು ಹೇಳಿದ ಹಾಗಾಯಿತು ತಕ್ಷಣ ಪಂಚೆ ಹಾಸಲು ಕಟ್ಟೆಯಿಂದ ಬುಳ್-ಬುಳ್ ಎಂಬ ಶಬ್ದದಿಂದ ಒಂದು ಶಿಲೆಯು ಶಂಖ, ಚಕ್ರ, ನಾಮ ಪದ್ಮಗಳಿಂದ ಕೂಡಿದ ರೀತಿಯಲ್ಲಿ ಬಂದಿತು.

ಅಬ್ಬಯ್ಯನು ಆ ಶಿಲೆಯನ್ನು ತೆಗೆದುಕೊಂಡು ಹೋಗಿ ದೇವರ ಮನೆಯ ಒಳಗೆ ಗೂಡಿನಲ್ಲಿಟ್ಟನು. ಆದಿನ ಶುಕ್ರವಾರ, ಮನೆಯೆಲ್ಲ ಸಾರಿಸಿ ರಂಗೋಲೆ ಹಾಕಿದ್ದರು. ಅಬ್ಬಯ್ಯನು ಬಹಳ ಭಕ್ತಿಯಿಂದ ಪೂಜಿಸುತ್ತಾ ಬಂದನು.

ಅವರ ಬಡತನ ಹೋಗಿ ಐಶ್ವರ್ಯವು ದಿನೇ ದಿನೇ ವೃದ್ಧಿಯಾಯಿತು. ಅಬ್ಬಯ್ಯನು ಮುತ್ತುಗದ ಗಿಡದಲ್ಲಿ ನೇಗಿಲು ಮಾಡಿಕೊಂಡು ಉತ್ತು ಬೆಳೆದ ಬೆಳೆಯನ್ನು ರಾಶಿ ಹಾಕಿ ಕಣಕ್ಕೆ ಪೂಜೆ ಮಾಡಿದಾಗ ಬೆಳೆ ತುಂಬಿ ಹೊರಕ್ಕೆ ರಾಶಿ ಹೊರಟಾಗ ಅಬ್ಬಯ್ಯನ ತಾಯಿ ತನ್ನ ಸೀರೆಯ ಸೆರಗನ್ನು ಅದರ ಮೇಲೆ ಹಾಕಿದಾಗ ರಾಶಿಯು ಅಲ್ಲೇ ನಿಂತಿತು ಎಂದು ಹಿರಿಯರು ಹೇಳುವರು.

ಅಬ್ಬಯ್ಯನು ಸತ್ತ ನಂತರ ಆ ಶಿಲಾವಿಗ್ರಹ ಹಾಲಿ ಇರುವ ದೇವಸ್ಥಾನದಲ್ಲಿ ಇದೆ. ಅದನ್ನು ಈಗ ಶ್ರೀಲಕ್ಷ್ಮೀ ಎಂದು ಕರೆಯುತ್ತಾರೆ.

ಅಬ್ಬಯ್ಯನು ಸತ್ತನಂತರ ಅವರ ಮಗ ತೋಟದಪ್ಪನು ಪೂಜೆ ನಡೆಸಿಕೊಂಡು ಹೋಗುತ್ತಿದ್ದನು. ತೋಟದಪ್ಪನಿಗೆ ಸ್ವಪ್ನದಲ್ಲಿ ಹೇಳಿದಂತೆ. ಕಾಲಿನಲ್ಲಿ ಮಣ್ಣು ತುಳಿಯದೆ ಬರೀ ಎಳ ನೀರಿನಲ್ಲಿ ಒಂದು ಚಿಕ್ಕ ಗೋಪುರ ಕಟ್ಟಿದನು. ವಿಗ್ರಹ ಈ ಗೂಡಿನಲ್ಲಿಯೇ ನೆಲೆಸಿರುತ್ತೆ. ಈಗ ಹಾಲಿ ಗೂಡಿನಲ್ಲಿರುವ ವಿಗ್ರಹವನ್ನೇ 'ಶ್ರೀಲಕ್ಷ್ಮೀ' ಎಂದು ಎಲ್ಲರೂ ಪೂಜಿಸುವರು.

ತೋಟದಪ್ಪನ ಐಶ್ವರ್ಯವು ಹೋಗಿ ಅವನು ಆ ಊರನ್ನೇ ಬಿಟ್ಟು, ಗೊರವನಹಳ್ಳಿಗೆ ಅರ್ಧ ಮೈಲು ದೂರದಲ್ಲಿ ಬಡತನದಲ್ಲಿ ಜೀವನ ನಡೆಸುತ್ತಿದ್ದನು. (ಅದನ್ನು ಈಗ ಅರಸರ ಪಾಳ್ಯ ಎನ್ನುವರು. ಅವನ ವಂಶದವರು ಐದು ಮನೆಯವರು ಮಾತ್ರ ಇದ್ದಾರೆ.)

ಹಿಂದೂಪುರದಿಂದ ಮೂರು ಜನಕಳ್ಳರು ಅಬ್ಬಯ್ಯನ ಮಗ ತೋಟದಪ್ಪನ ಮನೆಗೆ ಕನ್ನ ಹಾಕಲು ಬಂದು ಈ ದೇವಸ್ಥಾನದ ಹಿಂಭಾಗದಲ್ಲಿ ಕುಳಿತಾಗ ಅಲ್ಲಿಯೇ ಅವರಿಗೆ ಕಣ್ಣು ಕಾಣಿಸದಂತಾಯ್ತು. ಬೆಳಗ್ಗೆ ತೋಟದಪ್ಪನು ನದೀಕಡೆ ಬರುವಾಗ ಇವರು ಕುಳಿತಿರುವ ಕಾರಣ ಕೇಳಿದನು. ಅದಕ್ಕೆ ಕಳ್ಳರು "ನಾವು ಹಿಂದೂಪುರದಿಂದ ಬಂದಿದ್ದೇವೆ. ನಮ್ಮ ಕಣ್ಣುಗಳು ಹೋಗಿವೆ. ಏನು ಮಾಡಿದರೆ ಕಣ್ಣುಗಳು ಬರುತ್ತವೆ" ಎಂದು ಕೇಳಿಕೊಂಡರು. ಅದಕ್ಕೆ "ನೀವುಗಳು 48 ದಿನಗಳಲ್ಲಿ ಈ ದೇವಸ್ಥಾನವನ್ನು ಕಟ್ಟಿ ಕೊಡುತ್ತೇವೆಂದು ದೇವರನ್ನು ಕೇಳಿಕೊಂಡರೆ ಕಣ್ಣುಗಳು ಬರುತ್ತವೆ" ಎಂದನು. ಅವರು ಒಪ್ಪಿ "ನಾವು 48 ದಿನಗಳಲ್ಲಿ ಈ ದೇವಸ್ಥಾನವನ್ನು ಕಟ್ಟಿ ಕೊಡುತ್ತೇವೆ ಮಹಾತಾಯಿ, ನಮಗೆ ಕಣ್ಣುಗಳು ಬರಲಿ" ಎಂದು ಬೇಡಿಕೊಂಡರು ತಕ್ಷಣ ಕಣ್ಣುಗಳು ಬಂದವು. ಅವರು 48 ದಿನಗಳಲ್ಲಿ ಆ ಕಾರ್ಯ ಮುಗಿಸಿ ಹೊರಟು ಹೋದರು. ಈಗ ಈ ದೇವಸ್ಥಾನಕ್ಕೆ ಕಳ್ಳರು ಕಟ್ಟಿದ ದೇವಸ್ಥಾನವೆಂದು ಪ್ರತೀತಿ ಇದೆ. ಅಲ್ಲದೆ 48 ದಿನ ಭಕ್ತಿಯಿಂದ ಯಾರು ಪೂಜಿಸುವರೋ ಅವರಿಗೆ ಒಳ್ಳೆಯದಾಗುತ್ತದೆ.

ಅಬ್ಬಯ್ಯನವರ ಸಂತತಿಯ ನಂತರ ಚೌಡಯ್ಯ ಎಂಬ ನೇಯ್ಗೆಯವನು ಬಂದನು. ಇವನು ತಾಮ್ರದ ತಂಬಿಗೆಯಲ್ಲಿ ಹಣವಿಟ್ಟುಕೊಂಡು ಲೇವಾದೇವಿ ಮಾಡಿ ರಾತ್ರಿವೇಳೆ ತಂಬಿಗೆಯನ್ನು ದೇವರಪಕ್ಕದಲ್ಲಿ ಒಂದು ಗುಳಿಮಾಡಿ ಅದರಲ್ಲಿ ಇಡುತ್ತಿದ್ದನು. ಪೂಜೆ ಮಾಡಿದ ನಂತರ ಒಂದು ಲೋಟ ಹಾಲನ್ನಿಡುತ್ತಿದ್ದನು. ದೇವರಾಯನ ದುರ್ಗದಿಂದ ಒಂದು ಹಾವು ಇಲ್ಲಿಗೆ ಬರುತ್ತಿತ್ತು. ಅದು ಆ ಹಾಲನ್ನು ಕುಡಿದು ಹೋಗುತ್ತಿತ್ತು, ಎಂದು ತಿಳಿದವರು ಹೇಳುತ್ತಾರೆ.

ಹೀಗಿರಲು ಒಂದುದಿನ ಚೌಡಪ್ಪನು ತಂಬಿಗೆ ಹತ್ತಿರ ಹೋಗಲಿಲ್ಲ, ಅಲ್ಲಿ ಹುತ್ತ ಬೆಳೆದು, ಅದು ಈಗಲೂ ಬೆಳೆಯುತ್ತಲೇ ಇದೆ. ಆ ಹುತ್ತದ ಅಡಿಯಲ್ಲಿ ಹಣವಿದೆಯೆಂದು ಹೇಳುತ್ತಾರೆ.

ಚೌಡಪ್ಪ ನದಿಯಲ್ಲಿ ಸ್ನಾನಮಾಡಿ, ದೇವಸ್ಥಾನದಲ್ಲಿ ಅಡಿಗೆ ಮಾಡಿ ದೇವರಿಗೆ ನೈವೇದ್ಯ ಮಾಡಿದರೆ ದೇವರಿಗೆ ಒಪ್ಪುತ್ತಿತ್ತು. ಮನೆಯಿಂದ ಮಾಡಿದ ಅಡಿಗೆ ದೇವರ ನೈವೇದ್ಯಕ್ಕೆ ಒಪ್ಪುತ್ತಿರಲಿಲ್ಲ. ಹಾವು ಸಹ ಅವನಕಾಲದಲ್ಲಿ ಹಾಲನ್ನು ಇಟ್ಟರೆ ಅದು ಕುಡಿದು ಹೋಗುತ್ತಿತ್ತು ಎಂದು ಪೂರ್ವಿಕರು ಹೇಳುತ್ತಿರುತ್ತಾರೆ.

ಶ್ರೀಮತಿ ಶ್ರೀವಾಣಿಪ್ರಹ್ಲಾದರಾವ್

### ತಿರುಮಲೆ ತಿರುಪತಿ ದೇವಸ್ಥಾನಗಳು

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

ಕಲಿಯುಗ ವೈಕುಂಠವೆಂದು ಹೆಸರಾದ ತಿರುಮಲೆ ಶ್ರೀ ವೆಂಕಟೇಶ್ವರನ ಆವಾಸಸ್ಥಳ ಇಲ್ಲಿಗೆ ಸಹಸ್ರಾರು ಮಂದಿ ಯಾತ್ರಿಕರು ಪ್ರತಿದಿನವೂ ಬರುತ್ತಾರೆ ಅನುದಿನವೂ ಹೆಚ್ಚುತ್ತಿರುವ ಯಾತ್ರಿಕರ ವಸತಿ ಸೌಕರ್ಯಗಳಿಗಾಗಿ ತಿ ತಿ ದೇ. ಗಳು ದಾನಯೋಜನೆಯಲ್ಲಿ ಕಾಟೇಜುಗಳು, ಸತ್ರಗಳು, ಅತಿಥಿಗೃಹಗಳನ್ನು ನಿರ್ಮಿಸುತ್ತಿದೆ. ವಿವಿಧ ಯೋಜನೆಗಳ ವಿವರಗಳು ಈ ರೀತಿ ಇವೆ.

## ರಾಮಬಗೀಚಾ ಅತಿಥಿಗೃಹ

ಈ ಅತಿಥಿಗೃಹವನು ದೇವಾಲಯದ ಈಶಾನ್ಯ ಭಾಗದಲ್ಲಿ ನಿರ್ಮಿಸಲಾಗುವುದು.

ಇದು ಪ್ರತಿಯೊಂದರಲ್ಲೂ 40 ಸೂಟ್‌ಗಳಿರುವ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಸೂಟ್ 14′×18′ ಗಳದ್ದಾಗಿ, ಸುಮಾರು 600 ಚದರಡಿ ಪ್ಲಿಂತ್ ಏರಿಯಾದಲ್ಲಿ ಸಾಮಾನ್ಯ ಅಂಗಳವನ್ನು ಹೊಂದಿರುತ್ತದೆ.

ದಾನಿಗಳು ಒಂದು ಸೂಟ್ ನಿರ್ಮಾಣಕ್ಕೆ ರೂ 60,000 ನೀಡಬೇಕಾಗುವುದು

## ಸಪ್ತಗಿರಿ ಧರ್ಮಶಾಲೆ

8.5 ಕೋಟಿ ರೂಗಳ ವೆಚ್ಚದ ಈ ಭಾರೀ ಯೋಜನೆಯನ್ನು ಸಪ್ತಗಿರಿ ಸತ್ರಗಳ ನಿರ್ಮಾಣಕ್ಕಾಗಿ ತಿ.ತಿ.ದೇ ಕೈಗೊಂಡಿದೆ ಪ್ರತಿ ಸೂಟ್‌ನ ನಿರ್ಮಾಣ ವೆಚ್ಚ 80000 ರೂಗಳು

ದಾನಿಗಳು 40,000 ರೂಗಳನ್ನು ತಮ್ಮ ಹೆಸರಿನ ಒಂದು ಸೂಟ್‌ಗಾಗಿ ನೀಡಬೇಕಾಗುವುದು.

ಎ. ಟಿ ಸಿ. ಕಾಟೇಜುಗಳು ಹಾಗೂ ಎಂ. ಬಿ. ಸಿ ಕಾಟೇಜುಗಳಲ್ಲಿನ ಮೇಲಂತಸ್ತು ಕೋಣೆಗಳಿಗೂ ಇದೇ ರೀತಿ ದಾನಗಳನ್ನು ನೀಡಬಹುದು.

## ದಾನಿಗಳಿಗೆ ಪ್ರತಿಫಲ

* ದಾನಿಗಳಿಗೆ ತಮ್ಮ ದಾನದ ಪ್ರತಿಯಾಗಿ ವರ್ಷಕ್ಕೆ 60 ದಿನಗಳ ಕಾಲ ತಿರುಮಲೆಯಲ್ಲಿ ಉಚಿತ ವಸತಿ ದೊರೆಯುವುದು.
* ಕಂಪನಿಗಳಿಗೂ, ಸಂಸ್ಥೆಗಳಿಗೂ ಈ ಸೌಲಭ್ಯ 15 ವರ್ಷಕ್ಕೆ ಮಾತ್ರ ಸೀಮಿತ
* ದಾನಿಗಳ ಬಂಧುಗಳಿಗೆ ವಸತಿ ನೀಡುವಲ್ಲಿ ಆದ್ಯತೆ, ನೀಡಲಾಗುವುದು.
* ಪ್ರತಿ ಕಾಟೇಜ್/ಸೂಟ್ ನ ಹೊರಗೆ ದಾನಿಗಳ ಹೆಸರನ್ನು ಕೆತ್ತಲಾಗುವುದು.

ತಿ ತಿ.ದೇ ಕಾರ್ಯನಿರ್ವಹಣಾಧಿಕಾರಿಯವರ ಹೆಸರಿನಲ್ಲಿ ಪಡೆದ ಡಿ ಡಿ. ಯನ್ನು ತಿರುಮಲೆಯ ಎಕ್ಸಿಕ್ಯೂಟಿವ್ ಇಂಜನಿಯರ್–V ಇವರಿಗೆ ಕಳುಹಿಸಿ

**ತುಸು ಧನವನ್ನು ವಿನಿಯೋಗಿಸಿ, ಪುಣ್ಯಫಲವನ್ನು ಪಡೆಯಿರಿ**

ಮಿಕ್ಕ ವಿವರಗಳನ್ನು ಪಡೆಯಬಹುದಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ**
**ತಿ.ತಿ. ದೇವಸ್ಥಾನಗಳು**
**ತಿರುಪತಿ–೫೧೭೫೦೧ ಆಂಧ್ರಪ್ರದೇಶ.**

**ಕಾರ್ಯನಿರ್ವಹಣಾಧಿಕಾರಿ**

# ಶ್ರೀ ತುಳಜಾ ಭವಾನಿ ಸುಪ್ರಭಾತ

ಏಳಮ್ಮ ಏಳು ಬೆಳಗಾಯಿತು ॥ ಪ ॥

ಹಕ್ಕಿಗಳ ಇಂಚರ ಕೇಳುತಿದೆ
ವಿವಿಧ ಹೂಗಳ ಪರಿಮಳ ಹರಡಿದೆ
ಉದಯ ರವಿ ಕಿರಣ ಪಸರಿಸಿದೆ
ಏಳಮ್ಮ ಏಳು ಬೆಳಗಾಯಿತು ॥ ೧ ॥

ಸಕಲ ಲೋಕ ಜನನಿ ನಿತ್ಯ ಕಲ್ಯಾಣಿ
ಲೋಕ ಪಾವನಿ ಭವ ಭಯಹಾರಿಣಿ
ಶಿವರಮಣಿ ತುಳಜಾಪುರ ವಿಹಾರಿಣಿ
ಏಳಮ್ಮ ಏಳು ಬೆಳಗಾಯಿತು ॥ ೨ ॥

ಅರಿಶಿಣ ಕುಂಕುಮ ಪುಷ್ಪ ಗಂಧಗಳ ತಂದಿಹರು
ಸರ್ವ ಅಲಂಕಾರ ವಿವಿಧ ಭಕ್ಷ್ಯಗಳ ಹಿಡಿದಿಹರು
ಕುಪ್ಪಸ ಪೀತಾಂಬರಗಳ ಭಕ್ತರು ಹಿಡಿದಿಹರು
ಏಳಮ್ಮ ಏಳು ಬೆಳಗಾಯಿತು ॥ ೩ ॥

ಉದಯ ಕಾಲದಲಿ ಮಿಂದು ಬಂದಿಹರು
ಭಕ್ತಿಯಿಂದ ಸಾಮಗಾನ ಹಾಡುತಿಹರು
ನಿನ್ನ ದರುಶನಕೆ ಕಾದು ನಿಂತಿಹರು
ಏಳಮ್ಮ ಏಳು ಬೆಳಗಾಯಿತು ॥ ೪ ॥

ವನಿತೆಯರು ಆರತಿ ಹಿಡಿದಿಹರು
ಭಕ್ತಜನ ಮುದದಿ ಸ್ತುತಿಸುತಲಿಹರು
ದೇವ ದಾನವ ಮಾನವರೆಲ್ಲ ನಿನ್ನ ನಂಬಿಹರು
ಏಳಮ್ಮ ಏಳು ಬೆಳಗಾಯಿತು ॥ ೫ ॥

ಕಮಲ ನಯನೆ ಜ್ಯೋತಿ ಸ್ವರೂಪಿಣಿ
ಅಪರೂಪ ಲಾವಣ್ಯ ಮಣಿ
ಪಶುಪತಿ ಪ್ರಿಯೆ ಭಕ್ತರಕ್ಷಿಣಿ
ಏಳಮ್ಮ ಏಳು ಬೆಳಗಾಯಿತು ॥ ೬ ॥

ಭವ ಬಂಧಗಳ ಬಿಡಿಸು
ಪಾಪಗಳ ಪರಿಹರಿಸು
ದಾರಿ ತೋರಿ ಮುಕ್ತಿಯ ನೀಡು
ಏಳಮ್ಮ ಏಳು ಬೆಳಗಾಯಿತು ॥ ೭ ॥

ದೇವಿ ಜಗನ್ಮೋಹಿನಿ ಜಗಜ್ಜನನೀ
ಶಂಭುಪ್ರಿಯೆ ಸೌಭಾಗ್ಯದಾಯಿನೀ
ಭಕ್ತರಿಗೆ ಅಭಯ ವರದಾಯಿನೀ
ಏಳಮ್ಮ ಏಳು ಬೆಳಗಾಯಿತು ॥ ೮ ॥



ಶುಭದಾಯಿನಿ ತುಳಜಾ ಭವಾನಿ
ಸೃಷ್ಟಿ ಸ್ಥಿತಿಲಯ ಕಾರಣಿ
ಎದ್ದು ಸಕಲ ಲೋಕಗಳಿಗೆ ಶುಭಮಂಗಳ ಮಾಡಮ್ಮ
ಏಳಮ್ಮ ಏಳು ಬೆಳಗಾಯಿತು ॥ ೯ ॥

—ಎ. ಶಶಿಕಾಂತ





ಓಂ ಶ್ರೀ ಮಾತ್ರೇ ನಮಃ

ಫೋನ್:
ಕಚೇರಿ 472013
ಮನೆ: 861254

# ನವಶಕ್ತಿ ನಿಲಯ ದವರಿಂದ ಭಕ್ತರಿಗೆ ವಿಶಿಷ್ಟ ಕೊಡುಗೆ

ಜಗದ್ಗುರು ಶ್ರೀ ಕಂಚಿಕಾಮಕೋಟಿ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು, ಶ್ರೀ ತಿರುಮುರುಗ ಕೃಪಾನಂದ ವಾರಿಯರ್ ಮತ್ತಿತರ ಸಂತರ ಆಶಿಸ್ಸುಗಳನ್ನು ಹೊಂದಿ ದಿವ್ಯಯಂತ್ರಗಳನ್ನು ತಯಾರು ಮಾಡುವ ಸಂಸ್ಥೆ.

1. ಶ್ರೀಚಕ್ರ ಮಹಾಮೇರು (ಪಂಚಲೋಹ)
16×16 cm ಹಾಗೂ 10×10cm
4½ × 4½ cm. ರೂ. 350–00
2. ಶ್ರೀ ಮಹಾಗಣಪತಿ ಯಂತ್ರ 8×8 cm ರೂ. 130–00
(ತಾಪತ್ರಯಗಳನ್ನು ದೂರಮಾಡುವುದು)
3. ಶ್ರೀ ಮಹಾಲಕ್ಷ್ಮಿ ಮಹಾಯಂತ್ರ
24×24 cm ರೂ. 1100–00
(3ತಲೆಮಾರು ಪ್ರಭಾವಬೀರಿ, ಸಂತಸ ಸಂಪತ್ತು ಸುಖ ನೀಡುವುದು)
4. ಶ್ರೀಚಕ್ರ (ಸರ್ವದೇವತೆಗಳೊಂದಿಗೆ)8×8cm ರೂ. 130–00
5. ಸರ್ವಜನ ಮನ ಧನ ಆಕರ್ಷಣ, ಶ್ರೀ ಸಾಮ್ರಾಜ್ಯಲಕ್ಷ್ಮಿ
ಶ್ರೀ ಮಹಾಸುದರ್ಶನಂ 16×48 cm ರೂ. 1650–00
(ವ್ಯವಹಾರ, ಸಂಪತ್ತು, ಸಂತಸ, ಶಾಂತಿ ಅಭಿವೃದ್ಧಿಗೆ,
ಕೆಟ್ಟ ಕಣ್ಣಿನ ದೋಷ ನಿವಾರಣೆಗೆ)
6. ಸರ್ವಜನ ಮನಧನ ಆಕರ್ಷಣ ಸಾಮ್ರಾಜ್ಯಲಕ್ಷ್ಮಿ
ಶ್ರೀ ಮಹಾಸುದರ್ಶನ ಯಂತ್ರ 8×24 cm ರೂ. 450–00
(ಮೇಲಿನಂತೆಯೇ)
7. ಶೂಲಿನಿ, ಶರಭೇಶ್ವರ, ಪ್ರತ್ಯಂಗಿರ
(ಮೂರೂ ಯಂತ್ರಗಳನ್ನು ಒಂದೆಡೆಯಿಟ್ಟಲ್ಲಿ ನವಗ್ರಹದೋಷ ನಿವಾರಣೆ, ಶತ್ರುಪ್ರಭಾವ ನಾಶ, ಸಂತಸ ಸುಖ, ಹೆಚ್ಚುವುದು)
16×48 cm ರೂ. 1650–00
8 × 24 cm ರೂ. 450–00
8. ರಸಮಣಿ, ಪ್ರತಿಯೊಂದೂ ರೂ 250/–, ರೂ 350/–,
ರೂ 500–00
(ಏಕಾಗ್ರತೆಗೆ ದೋಹದಕಾರಿ, ಆರೋಗ್ಯವರ್ಧಕ, ಜರಾನಿರೋಧಕ)
9. ದೃಷ್ಟಿನಿವೃತ್ತಿ ಹಾಗೂ ಸುದರ್ಶನ ಪದಕ,
(ಅಪಘಾತ, ಶತ್ರುಗಳಿಂದ ರಕ್ಷಣೆಗೆ) ರೂ. 65–00
10. ಕಾಮಾಕ್ಷಿ ಶ್ರೀಚಕ್ರ ಪದಕ ರೂ. 65–00
(ಯಶಸ್ಸು, ಸಂಪತ್ತು ಅಭಿವೃದ್ಧಿಗಳಿಗೆ)
11. ಕಾಮಾಕ್ಷಿ, ಧನ ಆಕರ್ಷಣ ಪದಕ ರೂ. 65–00
(ಅಭೀಷ್ಟ ಸಿದ್ಧಿಗಾಗಿ)
12 ಕಾಮಾಕ್ಷಿ, ಮಾಂಗಲ್ಯಭಾಗ್ಯ ಪದಕ ರೂ. 65–00
(ಸುಖೀ ದಾಂಪತ್ಯ, ಪತಿ ಆಯುಷ್ಯಕ್ಕೆ)
13. ವಿವಾಹಪ್ರಾಪ್ತಿ ಪದಕ ರೂ. 65–00
(ಶೀಘ್ರ ವಿವಾಹಕ್ಕಾಗಿ)
14. ಶ್ರೀಚಕ್ರ–ಲಕ್ಷ್ಮಿ ಬೀಜದೊಡನೆ ರೂ. 65–00
(ಅಂಬಾಳ್ ಅನುಗ್ರಹಕ್ಕಾಗಿ)
15. ದೃಷ್ಟಿನಿವೃತ್ತಿ ಯಂತ್ರ, ರೂ. 65–00
(ಮನೆಯಲ್ಲಿ ವ್ಯವಹಾರದ ಸ್ಥಳದಲ್ಲಿ ಚೌಕಟ್ಟು ಹಾಕಿಡುವುದು)
16. ದತ್ತಾತ್ರೇಯ ಯಂತ್ರ 12 × 12 cm ರೂ. 150–00
(ಕೆಟ್ಟಕಣ್ಣು ದೋಷ ಪರಿಹಾರಕ್ಕೆ)
17. ರುದ್ರಾಕ್ಷಿಮಾಲೆ, ತುಳಸೀಮಾಲೆ, ಸ್ಫಟಿಕಮಾಲೆ, ವಿದ್ಯುದೀಕೃತ ತಾಮ್ರದಕಡಗ,
18. ಶ್ರೀ ಭುವನೇಶ್ವರೀ ದೇವಿ ಚಿತ್ರ 30 × 20 cm ರೂ. 20–00

ಇವಲ್ಲದೆ 108 ಇತರ ಯಂತ್ರಗಳೂ ನಮ್ಮಲ್ಲಿ ದೊರೆಯುವುವು. ದೇವಾಲಯಗಳಿಗೆ ಗೃಹ ಪೂಜಾಮಂದಿರಗಳಿಗೆ, ಗ್ರಾಮದೇವತೆಗಳಿಗೆ ಅಗತ್ಯವಾದ ಯಂತ್ರಗಳು ದೊರೆಯುತ್ತವೆ. ಒಂದೊಂದು ಯಂತ್ರವೂ ರೂ 105/– ವಿವರಗಳಿಗಾಗಿ 50 ಪೈಸೆ ಸ್ಟಾಂಪ್ ಹಚ್ಚಿದ ಕವರನ್ನು ಕೆಳಗಣ ವಿಳಾಸಕ್ಕೆ ಕಳುಹಿಸಿ ಕ್ಯಾಟಲಾಗ್ ಉಚಿತ, ವಿದೇಶೀ ಅಭ್ಯರ್ಥನೆಗಳನ್ನು 25% ಹೆಚ್ಚಿನ ಬೆಲೆಯೊಡನೆ ಅಂಗೀಕರಿಸಲಾಗುವುದು.



**ಉತ್ತರ ಪ್ರತ್ಯುತ್ತರಗಳು ಆಂಗ್ಲಭಾಷೆಯಲ್ಲಿ ಮಾತ್ರವೇ ನಡೆಯುವುವು.**

**ವಿಶ್ವಕರ್ಮಜ್ಞ ಶ್ರೀ ವಿದ್ಯೋಪಾಸಕ**
**ಸ್ವಾಮೀಜಿ ಶ್ರೀ ಎಸ್. ಮುರುಗಭೂಷಣಂ,**
ಅಧ್ಯಕ್ಷರು, ನವಶಕ್ತಿ ನಿಲಯ, 153, ಲಾಯಡ್ಸ್ ರೋಡ್,
(ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಎದುರು)
ಗೋಪಾಲಪುರಂ, ಮದ್ರಾಸು 600086

'ಲೋಕಾಃ ಸಮಸ್ತಾಃ ಸುಖಿನೋಭವಂತು'

# ಅಶ್ವತ್ಥ ವೃಕ್ಷ

ಯದ್ಯದ್ವಿಭೂತಿ ಮತ್ಸತ್ವಂ
ಶ್ರೀ ಮದೂರ್ಜಿತ ಮೇವವಾ ।
ತತ್ತ ದೇವಾವ ಗಚ್ಛತ್ವಂ
ಮಮ ತೇಜೋಂಶ ಸಂಭವಮ್ ॥

ಈ ಜಗತ್ತಿನ ವಿಶಿಷ್ಟಾಂಶಗಳಲ್ಲಿ ನಾನಿದ್ದೇನೆ ಎಂದು ಶ್ರೀಕೃಷ್ಣನು ಭಗವದ್ಗೀತೆಯಲ್ಲಿ ಹೇಳುತ್ತಾ "ಅಶ್ವತ್ಥಃ ಸರ್ವ ವೃಕ್ಷಾಣಾಂ" ಎನ್ನುತ್ತಾನೆ. (ವೃಕ್ಷಗಳಲ್ಲಿ ಅಶ್ವತ್ಥ ವೃಕ್ಷ ನನ್ನ ಅಂಶದಿಂದ ಕೂಡಿದೆ) ಅನಾದಿ ಕಾಲದಿಂದಲೂ ಅಶ್ವತ್ಥ ವೃಕ್ಷವು ಧಾರ್ಮಿಕವಾಗಿ ವಿಶೇಷವಾದ ಪ್ರಾಧಾನ್ಯವನ್ನು ಪಡೆಯುತ್ತಾ ಬಂದಿದೆ. ಅಶ್ವತ್ಥ, ಅರಳೀ ಪಿಪ್ಪಲ... .....ಇತ್ಯಾದಿ ಹೆಸರುಗಳಿಂದ ವೇದಗಳಲ್ಲಿ ಪುರಾಣ ಕಾವ್ಯಗಳಲ್ಲಿ ನಿಘಂಟು, ಶಾಸ್ತ್ರಗಳಲ್ಲಿ, ಆಯುರ್ವೇದ ಕೃತಿಗಳಲ್ಲಿ – ಹೀಗೆ ವಿವಿಧ ಮೂಲಗಳಲ್ಲಿ ಅದರ ಕುರಿತಾದ ವಿವಿಧ ಉಲ್ಲೇಖಗಳು ನಮಗೆ ದೊರೆಯುತ್ತವೆ ಸಾಮಾನ್ಯವಾಗಿ ವಿಶಾಲವಾಗಿ ಎತ್ತರಕ್ಕೆ ತನ್ನ ಕೊಂಬೆ ರೆಂಬೆಗಳನ್ನು ಚಾಚಿ ಹರಡಿ ಬೆಳೆಯುವ ಈ ಮರವನ್ನು ಎಲ್ಲಾ ಗ್ರಾಮ, ಪಟ್ಟಣಗಳ ಕೇರಿಗಳಲ್ಲಿ ಕಾಣಬಹುದು. ಪ್ರಾತಃ ಕಾಲದಲ್ಲಿ ಸ್ತ್ರೀ, ಪುರುಷ, ಆಬಾಲವೃದ್ಧರೆನ್ನುವ ವ್ಯತ್ಯಾಸಗಳಿಲ್ಲದೆ, ಇದಕ್ಕೆ ಪ್ರದಕ್ಷಿಣೆ ಹಾಕುವುದು ಕಂಡು ಬರುತ್ತದೆ. ಮೇಲ್ನೋಟದಲ್ಲಿ ಭಕ್ತಿಯ ಭಾವುಕತನ ನಮ್ಮನ್ನು ಸೆಳೆದರೆ ವೈಜ್ಞಾನಿಕವಾದ ಮಹತ್ವವನ್ನು ತಿಳಿದಾಗ ನಮ್ಮ ಹಿರಿಯರಿಗೆ ಈ ಪ್ರಕೃತಿಯ ವಿಶಿಷ್ಟಾಂಶಗಳಲ್ಲಿ ಪ್ರಾಚೀನ ಕಾಲದಿಂದಲೂ ಇದ್ದ ಕಾಳಜಿ ವ್ಯಕ್ತವಾಗುತ್ತದೆ ಮತ್ತು ಅದರ ಬಗ್ಗೆ ಬೆರಗೂ ಉಂಟಾಗುತ್ತದೆ.

ಈ ವೃಕ್ಷದ ಬಗ್ಗೆ ವಿವಿಧ ಪ್ರದೇಶಗಳಲ್ಲಿ ಪ್ರತ್ಯೇಕವಾದ ಧಾರ್ಮಿಕ ನಂಬಿಕೆಗಳಿವೆ. ಕೆಲವೆಡೆ ಈ ವೃಕ್ಷ ದತ್ತಾತ್ರೇಯ ದೇವತೆಯ ಸನ್ನಿಧಿಯಾಗಿದೆ. ಈ ವೃಕ್ಷದ ಬಗ್ಗೆ ಸಂಸ್ಕೃತ ಶ್ಲೋಕವೊಂದು ಹೀಗೆ ಹೇಳುತ್ತದೆ.

ಮೂಲತೋ ಬ್ರಹ್ಮ ರೂಪಾಯ
ಮಧ್ಯತೋ ವಿಷ್ಣು ರೂಪಿಣೇ ।
ಅಗ್ರತಃ ಶಿವ ರೂಪಾಯ
ವೃಕ್ಷ ರಾಜಾಯ ತೇ ನಮಃ ॥

ಈ ವೃಕ್ಷದ ಮೂಲದಲ್ಲಿ ಬ್ರಹ್ಮನೂ, ಮಧ್ಯದಲ್ಲಿ ವಿಷ್ಣುವೂ, ತುದಿಯಲ್ಲಿ ಈಶ್ವರನೂ ನಿವಾಸಿಸಿರುತ್ತಾರೆ ಅಂತಹ ವೃಕ್ಷರಾಜನಿಗೆ ನಮಸ್ಕರಿಸುತ್ತೇನೆ ಈ ನುಡಿಯಲ್ಲಿ ವಿಶಾಲವಾದ ಭಾವನೆಯಿರುವುದನ್ನು ಗಮನಿಸ ಬಹುದು

ಹಲವು ರೀತಿಯ ಭಕ್ತರು ಈ ವೃಕ್ಷವನ್ನು ನಾನಾ ಕಾರಣಗಳಿಗಾಗಿ ಆರಾಧಿಸುತ್ತಾರೆ. ಪುತ್ರ ಸಂತಾನವನ್ನು ಅಪೇಕ್ಷಿಸುವವರು ಇದಕ್ಕೆ ದಿನಾಲೂ ಪ್ರದಕ್ಷಿಣೆ ಹಾಕಿ ಪ್ರಾರ್ಥಿಸಿದರೆ ಶೀಘ್ರವಾಗಿ ಪುತ್ರ ಸಂತಾನವಾಗುವುದೆಂಬ ನಂಬಿಕೆಯಿದೆ ಅದಕ್ಕಾಗಿಯೇ ಅಶ್ವತ್ಥ ವೃಕ್ಷದಡಿ ಸಂತಾನ ದೇವತೆಯಾದ ನಾಗನ ವಿವಿಧ ರೂಪದ ರೂಪದ ಶಿಲೆಗಳನ್ನು ಪ್ರತಿಷ್ಠೆ ಮಾಡಿ ಅಶ್ವತ್ಥ–ನಾಗರಿಗೆ ಜೊತೆಯಾಗಿ ಅರ್ಚಿಸುವುದಿದೆ. ಏಳೂವರೆ ಶನಿಯ ಕಾಟ ಸಾಡೆ ಸಾತ, ಕಷ್ಟಕ್ಕೊಳಗಾದವರೂ ತಮ್ಮ ಗ್ರಹಚಾರ ಪರಿಹಾರಕ್ಕಾಗಿ ಅಶ್ವತ್ಥ ಸೇವೆ ಗೈಯ್ಯುವುದಿದೆ

ಅಶ್ವತ್ಥ ಸಸಿಯನ್ನು ನೆಟ್ಟು, ಅದು ಚಿಗುರಿ ಬೆಳೆದಾಗ, ಕಲ್ಲು ಗಾರೆಗಳಿಂದ ಅದಕ್ಕೆ ಸುಂದರವಾದ ಕಟ್ಟೆಯನ್ನು ಕಟ್ಟಿಸಿ, ಶುಭ ಮುಹೂರ್ತದಲ್ಲಿ ಷೋಡಶ ಸಂಸ್ಕಾರದ ಮಂತ್ರಗಳನ್ನುಚ್ಚರಿಸಿ ಹೋಮ ಮಾಡಿ, 'ಅಶ್ವತ್ಥೋಪನಯನ' ಮಾಡುವ ಪದ್ಧತಿ ವಿಶಿಷ್ಟವಾದುದು. ನಂತರ ಆಚರಿಸುವ 'ಅಶ್ವತ್ಥ ವಿವಾಹ' ಭಾವುಕ ರಸಿಕ ಭಕ್ತರಿಗೆ ಪರಮಾತ್ಮನ ಸ್ಮರಣೆಯಿಂದ ಭಾವ ಶುದ್ಧಿಯನ್ನುಂಟು ಮಾಡುವುದು. ತುಳಸಿ (ಪವಿತ್ರ ಸಸ್ಯ) ಯನ್ನು ಸ್ತ್ರೀಯಾಗಿಯೂ, ಅಶ್ವತ್ಥವನ್ನು ಪುರುಷನಾಗಿಯೂ ಕಲ್ಪಿಸಿ, ಬ್ರಾಹ್ಮಣರು ಅಶ್ವತ್ಥ ತುಳಸಿಯ ಮಧ್ಯೆ ಅಂತರ ಪಟವಿಡಿದು, ತುಳಸಿಯ ಕೊರಳಿಗೆ ಪುಷ್ಪಾಲಂಕಾರಗಳಿಂದ ಶೃಂಗಾರ ಮಾಡಿ, ವಿವಾಹದ ಮಂಗಳಾಷ್ಟಕವನ್ನು ಹಾಡುವ ದೃಶ್ಯ ನಯನ ಮನೋಹರವಾದುದು ಪ್ರಕೃತಿಯ ವಿಶಿಷ್ಟ ಶಕ್ತಿಗಳಿಗೆ ಮಾನವೀಯತೆಯನ್ನು ತುಂಬಿಸಿ ದೈವತ್ವಕ್ಕೇರಿಸುವ ಈ ಅಂಶಗಳ ಮಹತ್ವ ಯೋಚಿಸಿದವರಿಗೆ ತಿಳಿಯುತ್ತದೆ.

> ಮರಗಳನ್ನು ಉಳಿಸಿ;
> ಅವು ನಮ್ಮನ್ನು
> ಉಳಿಸುತ್ತವೆ.

## ಯಜ್ಞಗಳಲ್ಲಿ

ಈ ಮರದ ಕಾಂಡದಿಂದ ಯಜ್ಞ ಪಾತ್ರೆಗಳನ್ನು ಮಾಡುತ್ತಿದ್ದರೆಂಬುದು ಅಥರ್ವವೇದ ಮತ್ತು ಕಾತ್ಯಾಯನ ಶ್ರೌತ ಸಂಹಿತೆಗಳ ಪ್ರಮಾಣಗಳಿಂದ ತಿಳಿಯುತ್ತದೆ. ಯಜ್ಞಕ್ಕೆ ಅಗ್ನಿಯನ್ನು ಉತ್ಪಾದಿಸುವ "ಅರಣಿ"ಯನ್ನು ಅಶ್ವತ್ಥದ ಕಾಂಡಗಳಿಂದ ತಯಾರಿಸುತ್ತಿದ್ದರು. ನವಗ್ರಹಗಳಲ್ಲಿ ಶ್ರೇಷ್ಠನಾದ ಗುರುವಿಗೆ ಅಶ್ವತ್ಥವೆಂದು ನವಗ್ರಹ ಪೂಜೆಯಲ್ಲಿ ಆರಾಧಿಸುತ್ತಾರೆ. ಯಜ್ಞದಲ್ಲಿ ಗುರುವಿಗಾಗಿ ಅಶ್ವತ್ಥ ಸಮಿಧೆಗಳನ್ನು ಮಂತ್ರಿಸಿ ಆಹುತಿ ಕೊಡುವುದಿದೆ.

## ಔಷಧೀಯ ಗುಣಗಳು

ಈ ವೃಕ್ಷದ ಔಷಧೀಯ ಗುಣಗಳ ಬಗ್ಗೆ ವಿವಿಧ ಕೃತಿಗಳಲ್ಲಿ ಉಲ್ಲೇಖಗಳು ಸಿಗುತ್ತವೆ.

ಮದನ ಪಾಲವೆಂಬ ನಿಘಂಟುವಿನಲ್ಲಿ

ಪಿಪ್ಪಲೋ ದುರ್ಜರಂ ಶೀತೋ
ವ್ರಣಶ್ಲೇಷ್ಮಾಸ್ರ ಪಿತ್ತಜಿತ್

ಎಂದು ಹೇಳಿದೆ ಅಂದರೆ ಅಶ್ವತ್ಥದ ವಿವಿಧ ಭಾಗಗಳು ಜೀರ್ಣಕ್ಕೆ ಕಠಿಣವಾದರೂ, ಶೀತಗುಣವುಳ್ಳದ್ದಾಗಿವೆ. ಗಾಯಗಳನ್ನು ಗುಣಪಡಿಸುವುದು, ಕಫವನ್ನು ನಿವಾರಿಸುವುದು, ರಕ್ತಸ್ರಾವವನ್ನು ತಡೆಗಟ್ಟುವುದು ಇತ್ಯಾದಿ ಇದರ ವೈಶಿಷ್ಟ್ಯ.

ಧನ್ವಂತರಿ ನಿಘಂಟುವಿನಲ್ಲಿ,

ಅಶ್ವತ್ಥೋಪಿ ಸ್ಮೃತಸ್ತದ್ವತ್ ರಕ್ತ ಪಿತ್ತ ಕಫಾಪಹಾ–ಅಂದರೆ ಅರಳೀ ಮರವು ರಕ್ತಸ್ರಾವ, ಕಫ, ಪಿತ್ತ...... ..ಇತ್ಯಾದಿಗಳನ್ನು ಪರಿಹರಿಸುವುದು ಎಂದಿದೆ.

ಪ್ರಾಚೀನ ಕಾಲದಿಂದಲೂ ವನ್ಯ ಸಂರಕ್ಷಣೆಯ ಕಳಕಳಿಯನ್ನು ಮಾನವ ಹೊಂದಿದ್ದ. ದಿನನಿತ್ಯ ಕಾಣುವ ಹಲವು ವೃಕ್ಷಗಳಲ್ಲಿ ಅಶ್ವತ್ಥ ವೃಕ್ಷ ಮಾನವ ಸಮುದಾಯದ ಮೇಲೆ ಯಾವುದೋ ವಿಶಿಷ್ಟವಾದ ಪ್ರಭಾವವನ್ನು ಬೀರಬೇಕು.

ಪದ್ಮ ಪುರಾಣದ ಸೃಷ್ಟಿ ಖಂಡದಲ್ಲಿ–

ಅಶ್ವತ್ಥರೋಪಣಂ ಕೃತ್ವಾ
ಜಲಾಶಯ ಸಮೀಪತಃ
ಯತ್ಫಲಂ ಲಭ್ಯತೇ ಮರ್ತ್ಯೈರ್
ನತತ್ಕ್ರತು ಶತೈರಪಿ ॥

ಶ್ರೀ ಸಿದ್ಧಾಪುರ ವಾಸುದೇವಭಟ್ಟ







ಓಂ ಶ್ರೀ ಮಾತ್ರೇ ನಮಃ

ಫೋನ್ :
ಕಚೇರಿ 472013
ಮನೆ : 861254

# ನವಶಕ್ತಿ ನಿಲಯ ದವರಿಂದ
# ಭಕ್ತರಿಗೆ ವಿಶಿಷ್ಟ ಕೊಡುಗೆ

ಜಗದ್ಗುರು ಶ್ರೀ ಕಂಚಿಕಾಮಕೋಟಿ ಶ್ರೀ ಜಯೇಂದ್ರ ಸರಸ್ವತಿ ಸ್ವಾಮಿಗಳು, ಶ್ರೀ ತಿರುಮುರುಗ ಕೃಪಾನಂದ ವಾರಿಯರ್ ಮತ್ತಿತರ ಸಂತರ ಆಶಿಸ್ಸುಗಳನ್ನು ಹೊಂದಿ ದಿವ್ಯಯಂತ್ರಗಳನ್ನು ತಯಾರು ಮಾಡುವ ಸಂಸ್ಥೆ.

1. ಶ್ರೀಚಕ್ರ ಮಹಾಮೇರು (ಪಂಚಲೋಹ)
16×16 cm ಹಾಗೂ 10×10cm
4½ × 4½ cm. ರೂ. 350-00
2. ಶ್ರೀ ಮಹಾಗಣಪತಿ ಯಂತ್ರ 8×8 cm ರೂ. 130-00
(ತಾಪತ್ರಯಗಳನ್ನು ದೂರಮಾಡುವುದು)
3. ಶ್ರೀ ಮಹಾಲಕ್ಷ್ಮಿ ಮಹಾಯಂತ್ರ
24×24 cm ರೂ. 1100-00
(3ತಲೆಮಾರು ಪ್ರಭಾವಬೀರಿ, ಸಂತಸ ಸಂಪತ್ತು ಸುಖ ನೀಡುವುದು)
4. ಶ್ರೀಚಕ್ರ (ಸರ್ವದೇವತೆಗಳೊಂದಿಗೆ)8×8cm ರೂ. 130-00
5. ಸರ್ವಜನ ಮನ ಧನ ಆಕರ್ಷಣ, ಶ್ರೀ ಸಾಮ್ರಾಜ್ಯಲಕ್ಷ್ಮಿ
ಶ್ರೀ ಮಹಾಸುದರ್ಶನಂ 16×48 cm ರೂ. 1650-00
(ವ್ಯವಹಾರ, ಸಂಪತ್ತು, ಸಂತಸ, ಶಾಂತಿ ಅಭಿವೃದ್ಧಿಗೆ,
ಕೆಟ್ಟ ಕಣ್ಣಿನ ದೋಷ ನಿವಾರಣೆಗೆ)
6. ಸರ್ವಜನ ಮನಧನ ಆಕರ್ಷಣ ಸಾಮ್ರಾಜ್ಯಲಕ್ಷ್ಮಿ
ಶ್ರೀ ಮಹಾಸುದರ್ಶನ ಯಂತ್ರ 8×24 cm ರೂ. 450-00
(ಮೇಲಿನಂತೆಯೇ)
7. ಶೂಲಿನಿ, ಶರಭೇಶ್ವರ, ಪ್ರತ್ಯಂಗಿರ
(ಮೂರೂ ಯಂತ್ರಗಳನ್ನು ಒಂದೆಡೆಯಿಟ್ಟಲ್ಲಿ ನವಗ್ರಹದೋಷ ನಿವಾರಣೆ, ಶತ್ರು ಪ್ರಭಾವ ನಾಶ, ಸಂತಸ ಸುಖ, ಹೆಚ್ಚುವುದು)
16×48 cm ರೂ. 1650-00
8 × 24 cm ರೂ. 450-00
8. ರಸಮಣಿ, ಪ್ರತಿಯೊಂದೂ ರೂ 250/-, ರೂ 350/-,
ರೂ 500-00
(ಏಕಾಗ್ರತೆಗೆ ದೋಹದಕಾರಿ, ಆರೋಗ್ಯವರ್ಧಕ, ಜರಾನಿರೋಧಕ)
9. ದೃಷ್ಟಿನಿವೃತ್ತಿ ಹಾಗೂ ಸುದರ್ಶನ ಪದಕ,
(ಅಪಘಾತ, ಶತ್ರುಗಳಿಂದ ರಕ್ಷಣೆಗೆ) ರೂ. 65-00
10. ಕಾಮಾಕ್ಷಿ ಶ್ರೀಚಕ್ರ ಪದಕ ರೂ. 65-00
(ಯಶಸ್ಸು, ಸಂಪತ್ತು ಅಭಿವೃದ್ಧಿಗಳಿಗೆ)
11. ಕಾಮಾಕ್ಷಿ, ಧನ ಆಕರ್ಷಣ ಪದಕ ರೂ. 65-00
(ಅಭೀಷ್ಟ ಸಿದ್ಧಿಗಾಗಿ)
12 ಕಾಮಾಕ್ಷಿ, ಮಾಂಗಲ್ಯಭಾಗ್ಯ ಪದಕ ರೂ. 65-00
(ಸುಖೀ ದಾಂಪತ್ಯ, ಪತಿ ಆಯುಷ್ಯಕ್ಕೆ)
13. ವಿವಾಹಪ್ರಾಪ್ತಿ ಪದಕ ರೂ. 65-00
(ಶೀಘ್ರ ವಿವಾಹಕ್ಕಾಗಿ)
14. ಶ್ರೀಚಕ್ರ—ಲಕ್ಷ್ಮಿ ಬೀಜದೊಡನೆ ರೂ. 65-00
(ಅಂಬಾಳ್ ಅನುಗ್ರಹಕ್ಕಾಗಿ)
15. ದೃಷ್ಟಿನಿವೃತ್ತಿ ಯಂತ್ರ, ರೂ. 65-00
(ಮನೆಯಲ್ಲಿ ವ್ಯವಹಾರದ ಸ್ಥಳದಲ್ಲಿ ಚೌಕಟ್ಟು ಹಾಕಿಡುವುದು)
16. ದತ್ತಾತ್ರೇಯ ಯಂತ್ರ 12 × 12 cm ರೂ. 150-00
(ಕೆಟ್ಟಕಣ್ಣು ದೋಷ ಪರಿಹಾರಕ್ಕೆ)
17. ರುದ್ರಾಕ್ಷಮಾಲೆ, ತುಳಸೀಮಾಲೆ, ಸ್ಫಟಿಕಮಾಲೆ, ವಿದ್ಯುದೀಕೃತ ತಾಮ್ರಕಡಗ,
18. ಶ್ರೀ ಭುವನೇಶ್ವರೀ ದೇವಿ ಚಿತ್ರ 30 × 20 cm ರೂ. 20-00

ಇವಲ್ಲದೆ 108 ಇತರ ಯಂತ್ರಗಳೂ ನಮ್ಮಲ್ಲಿ ದೊರೆಯುವುವು. ದೇವಾಲಯಗಳಿಗೆ ಗೃಹ ಪೂಜಾಮಂದಿರಗಳಿಗೆ, ಗ್ರಾಮದೇವತೆಗಳಿಗೆ ಅಗತ್ಯವಾದ ಯಂತ್ರಗಳು ದೊರೆಯುತ್ತವೆ. ಒಂದೊಂದು ಯಂತ್ರವೂ ರೂ 105/- ವಿವರಗಳಿಗಾಗಿ 50 ಪೈಸೆ ಸ್ಟಾಂಪ್ ಹಚ್ಚಿದ ಕವರನ್ನು ಕೆಳಗಣ ವಿಳಾಸಕ್ಕೆ ಕಳುಹಿಸಿ ಕ್ಯಾಟಲಾಗ್ ಉಚಿತ, ವಿದೇಶೀ ಅಭ್ಯರ್ಥನೆಗಳನ್ನು 25% ಹೆಚ್ಚಿನ ಬೆಲೆಯೊಡನೆ ಅಂಗೀಕರಿಸಲಾಗುವುದು.



**ಉತ್ತರ ಪ್ರತ್ಯುತ್ತರಗಳು ಆಂಗ್ಲಭಾಷೆಯಲ್ಲಿ ಮಾತ್ರವೇ ನಡೆಯುವುವು.**

**ವಿಶ್ವಕರ್ಮಜ್ಞ ಶ್ರೀ ವಿದ್ಯೋಪಾಸಕ**
**ಸ್ವಾಮೀಜಿ ಶ್ರೀ ಎಸ್. ಮುರುಗಭೂಷಣಂ,**
ಅಧ್ಯಕ್ಷರು, ನವಶಕ್ತಿ ನಿಲಯ, 153, ಲಾಯಡ್ಸ್ ರೋಡ್,
(ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಎದುರು)
ಗೋಪಾಲಪುರಂ, ಮದ್ರಾಸು 600086

'ಲೋಕಾಃ ಸಮಸ್ತಾಃ ಸುಖಿನೋಭವಂತು'

# ವಾಲಿಯ ವಧೆ - ಒಂದು ವಿಮರ್ಶೆ

ವಿದ್ವಾನ್
ಎಂ. ಎಲ್. ನರಸಿಂಹಮೂರ್ತಿ

ಕಾವ್ಯ ಪ್ರಪಂಚದಲ್ಲಿ ಆದಿಕಾವ್ಯವೆಂಬದಾಗಿ ವಿದ್ವಾಂಸರಿಂದ ಮಾನ್ಯ ಮಾಡಲ್ಪಟ್ಟ ಶ್ರೀಮದ್ ರಾಮಾಯಣವು ಮಹರ್ಷಿ ವಾಲ್ಮೀಕಿಯಿಂದ ಪ್ರಣೀತವಾಗಿರುವುದು ಸರ್ವ ವಿದಿತವೇ ಆಗಿದೆ. ಈ ರಾಮಾಯಣ ಕಾವ್ಯವನ್ನು ಓದಿದಾಗ ಮನಸ್ಸಿನಲ್ಲಿ ಒಂದು ವಿಧವಾದ ಅನಿರ್ವಚನೀಯ ಅನುಭವವೂ ಆಗುವುದು ಸಹಜವೇ ಆಗಿರುತ್ತದೆ. ಅದಕ್ಕೆ ಮುಖ್ಯಕಾರಣ ಆ ಕಾವ್ಯದ ರಮಣೀಯ ಶೈಲಿ ಹಾಗೂ ಗಂಭೀರ ವಿಷಯಗಳಿಂದ ಕೂಡಿದ ಕಥಾವಸ್ತು. ಹಾಗೆಯೇ ಮೇಲುನೋಟಕ್ಕೆ ಕೆಲವೊಂದೆಡೆ ಕೆಲವು ಸಂದೇಹಗಳೂ ಓದುಗರ ಮಾನಸಪಥದಲ್ಲಿ ಮೂಡುತ್ತವೆ ಅಂತಹವುಗಳಲ್ಲಿ ಒಂದಾದ ವಾಲಿಯ ವಧೆಯು ಒಂದು ಪ್ರಧಾನ ವಿಮರ್ಶಾ ವಿಷಯವಾಗಿದೆ.

ಈ ವಾಲಿ ವಧೆಯು ನಿಷ್ಕಳಂಕ ಚಾರಿತ್ರ್ಯವಿರುವ ಮರ್ಯಾದಾ ಪುರುಷೋತ್ತಮನಾದ ಶ್ರೀರಾಮಚಂದ್ರನಿಗೆ ಕಳಂಕಪ್ರಾಯವಾಗಿ ತೋರುತ್ತದೆ ಹಾಗಾದರೆ ಈ ವಾಲಿ ವಧೆಯು ಅನ್ಯಾಯವೇ? ಧರ್ಮಬಾಹಿರವೇ? ಧರ್ಮರಕ್ಷಣೆಗಾಗಿ ಅವತಾರವೆತ್ತಿದ ರಾಮನಿಂದಾದ ಅಧರ್ಮಾಚರಣೆಯೆ? ನ್ಯಾಯವಾಗಿಯೂ ವಾಲಿ ವಧಾರ್ಹನೇ? ವಧಾರ್ಹನೇ ಆಗಿದ್ದಲ್ಲಿ ರಾಮನು ಮರೆಯಾಗಿ ನಿಂತು ಹೊಡೆದುದು ನ್ಯಾಯವೇ? ಎಂದಿವೇ ಮೊದಲಾದ ಸಂಶಯಗಳು ಓದುಗರ ಮನಸ್ಸಿನಲ್ಲಿ ಸುಳಿದಾಡುತ್ತವೆ. ಈ ಸಂದೇಹ ನಿವಾರಣೆಗೆ ಉಪಕ್ರಮಿಸಿದಾಗ ಅನೇಕ ವಿಧ ವಾದವಿವಾದಗಳು ಖಂಡನೆ ಮಂಡನೆ ಉಂಟಾಗುವುದು ಸಹಜ. ಆದರೆ, ಪ್ರಮುಖವಾಗಿ ಇಲ್ಲಿ ಮಾಡಬೇಕಾದ ವಿಚಾರವಿಷ್ಟು. ಪ್ರಥಮವಾಗಿ ಶ್ರೀರಾಮನನ್ನು ಅವತಾರಪುರುಷ ದೈವಾಂಶ ಸಂಭೂತ ಎಂದು ತಿಳಿದು ಅದಕ್ಕನುಗುಣವಾಗಿ ಅವನ ಚರ್ಯೆಯ ಅವಲೋಕನ ಮಾಡುವುದು, ಅಥವಾ ರಾಮಾಯಣವನ್ನು ಕಾವ್ಯದೃಷ್ಟಿಯಿಂದ ಅವಲೋಕಿಸಿ ಅದರ ಕಥಾನಾಯಕನ ಗುಣಗಳನ್ನು ಕಾವ್ಯ ದೃಷ್ಟಿಯಿಂದಲೇ ಪರಿಶೀಲಿಸುವುದು.

ರಾಮನನ್ನು ದೈವಾಂಶ ಸಂಭೂತನಾದ ಅವತಾರ ಪುರುಷ ಎಂದು ತಿಳಿದು ವಿಚಾರಿಸ ಹೊರಟರೆ ಅವನಿಗೆ ಯಾವ ದೋಷ ಸಂಸ್ಪರ್ಶವೂ ಆಗುವುದಿಲ್ಲ ಏಕೆಂದರೆ ಅವನಲ್ಲಿ ದೈವತ್ವವನ್ನು ಅಂಗೀಕರಿಸಿರುವುದರಿಂದ. ಆ ದೃಷ್ಟಿಯಿಂದ ಎಲ್ಲ ಸಂದೇಹಗಳಿಗೂ ಉತ್ತರ ಹೇಳುವುದು ಸುಲಭ. ಆದರೆ ಇಲ್ಲಿ ಅದು ಚರ್ಚಾ ವಿಷಯವಲ್ಲ. ಆದಿಕಾವ್ಯದಲ್ಲಿ ವರ್ಣಿಸಿರುವಂತೆ ಮನುಕುಲ ಸಂಭೂತನಾದ ರಾಮನನ್ನು ಮರ್ಯಾದಾ ಪುರುಷೋತ್ತಮ ಕಥಾನಾಯಕನಾಗಿ ಅವಲೋಕಿಸಿದಾಗ ವಾಲಿ ವಧೆಯು ರಾಮನ ನಿಷ್ಕಳಂಕ ಚಾರಿತ್ರ್ಯಕ್ಕೆ ಚ್ಯುತಿ ತರುವಂತೆ ಕಾಣುತ್ತದೆ. ಕವಿಯೂ ಕೂಡ ರಾಮನನ್ನು ಸಹಜವಾಗಿ ಮಾನವ ಗುಣಯುಕ್ತನಾಗಿರುವ ತೆರೆಯೇ ಚಿತ್ರಿಸಿದ್ದಾನೆ ಉದಾಹರಣೆಗೆ, ಸೀತಾವಿಯೋಗದ ಸಮಯದಲ್ಲಿ ರಾಮನ ವಿಲಾಪ ಹಾಗೂ ಸೀತಾನ್ವೇಷಣೆಗಾಗಿ ವಾನರ ಪ್ರೇಷಣ. ರಾಮನು ದೈವಾಂಶಸಂಭೂತನೆಂದೇ ತಿಳಿದು ವಿಚಾರ ಮಾಡಿದಾಗ ಅವನ ವಿಲಾಪ ಮೊದಲಾದವು ಅರ್ಥಹೀನವಾಗುತ್ತವೆ ಆದುದರಿಂದ ಇಲ್ಲಿ ರಾಮನ ಬಾಣದಿಂದ ಹತನಾದ ವಾಲಿಯ ಆರೋಪ ಹಾಗೂ ಅದಕ್ಕೆ ರಾಮನ ಸಮಾಧಾನ ವಾಕ್ಯಗಳನ್ನು ಬಹಳ ಜಾಗರೂಕತೆಯಿಂದ ಪರಿಶೀಲಿಸಬೇಕಾಗಿದೆ.

ಇಲ್ಲಿ ಕವಿಯು ಬಹಳ ಚಾಣಾಕ್ಷತೆಯಿಂದ ರಾಮಾಯಣ ಕಾಲದ ಸಾಮಾಜಿಕ, ಧಾರ್ಮಿಕ ಹಾಗೂ ರಾಜನೀತಿಗಳ ಚಿತ್ರಣವನ್ನು ಹೃದಯಂಗಮವಾಗಿ ಮಾಡಿದ್ದಾನೆ. ಒಂದು ವೇಳೆ ರಾಮಾಯಣದ ಘಟನೆ ನಡೆದಿರುವುದು ಸುಳ್ಳು, ಎಲ್ಲಾ ಕಪೋಲಕಲ್ಪಿತ ಎಂದಿಟ್ಟುಕೊಂಡರೂ ತನ್ನ ಕಲ್ಪಿತ ಕಥಾನಾಯಕನ ಉದ್ದೇಶಕ್ಕೆ ಹಾಗೂ ಚಾರಿತ್ರ್ಯಕ್ಕೆ ಭಂಗ ಬರದಂತೆ ಚಿತ್ರಿಸಿದ್ದಾನೆ. ಅಲ್ಲದೆ ಆ ದಿನ ಕಾಲದ ಸಾಮಾಜಿಕ, ಧಾರ್ಮಿಕ, ರಾಜನೈತಿಕ ಪದ್ಧತಿಗಳನ್ನು ನಾವು ಇಂದಿನ ಕಾಲದ ಪದ್ಧತಿಗಳ ಜೊತೆ ತುಲನಾತ್ಮಕವಾಗಿ ಪರಿಶೀಲಿಸಿದಾಗ ಆ ಪದ್ಧತಿಗಳು ತಪ್ಪಾಗಿ ಕಾಣುವುದು ಸಹಜವಾದರೂ ಅಂದಿಗೆ ಅದೇ ಸರಿ. ಉದಾಹರಣೆಗೆ ಈಗ ತಪ್ಪಾಗಿ ಕಾಣುವ ಬಾಲ್ಯ ವಿವಾಹ ಮುಂತಾದವುಗಳು ಅಂದು ಮಾನ್ಯವಾಗಿದ್ದವು. ರಾಮನ ಕಾರ್ಯ ತಪ್ಪೆಂದು ವಾಲಿ ಹೀಗೆ ನಿಂದಿಸುತ್ತಾನೆ –

> ಧಾರ್ಯಂ ಚರ್ಮವೇಸ್ಥ್ಯ
> ರೋಮಾಣ್ಯಸ್ಥಿ ಚ ವರ್ಜಿತಂ
> ಅಭಕ್ಷ್ಯಾಣಿ ಚ ಮಾಂಸಾನಿ
> ತ್ವದ್ವಿಧೈರ್ಧರ್ಮಚಾರಿಭಿಃ ॥
>
> ಪಂಚ ಪಂಚ ನಖಾಃ ಭಕ್ಷ್ಯಾ
> ಬ್ರಹ್ಮಕ್ಷತ್ರೇಣ ರಾಘವ ।
> ಶಲ್ಯಕಃ ಶ್ವಾವಿಧೋ ಗೋಧಾ
> ಶಶಃ ಕೂರ್ಮಶ್ಚ ಪಂಚಮಃ ॥
>
> ಚರ್ಮ ಚಾಸ್ಥಿ ಚ ಮೇ ರಾಮ
> ನಸ್ಪೃಶಂತಿ ಮನೀಷಿಣಃ
> ಅಭಕ್ಷ್ಯಾಣಿ ಚ ಮಾಂಸಾನಿ
> ಸೋಽಹಂ ಪಂಚನಖೋ ಹತಃ ॥

(ಕಿಷ್ಕಿಂಧಾಕಾಂಡ, ಸರ್ಗ 17,
ಶ್ಲೋಕ 38,39,40)

ಮೇಲೆ ಹೇಳಿದಂತೆ ವಾಲಿಯು ತನ್ನ ವಧೆಯು ಅಕಾರಣವೂ ಅನ್ಯಾಯವೂ ಆದದ್ದೆಂದು ಪ್ರತಿಪಾದಿಸುತ್ತಾನೆ ಅಂದರೆ ಇಲ್ಲಿ ಕವಿಯು ಧರ್ಮಸೂಕ್ಷ್ಮವನರಿಯದ ವಾನರ ಯೋಚನಾಲಹರಿಯನ್ನೇ ಚಿತ್ರಿಸಿದ್ದಾನೆ ಈ ರೀತಿ ಪ್ರತಿಯೊಂದು ವಿಷಯವನ್ನು ಅದಕ್ಕನುಗುಣವಾದ ಪಾತ್ರದಲ್ಲಿ ಬರುವಂತೆ ಚಿತ್ರಿಸಿರುವುದೇ ರಾಮಾಯಣ ಕಾವ್ಯದ ವೈಶಿಷ್ಟ್ಯ ಆದ್ದರಿಂದ ವಾಲಿ ವಧೆ ಅಸಂಗತವೆಂದು ತೋರುವುದು ಸಹಜ ತಮ್ಮನ ಹೆಂಡತಿಯನು ತಂದಿಟ್ಟುಕೊಂಡಂತಹ ಕಾಮುಕ ಹಾಗೂ ಗರ್ವಿ ವಾಲಿ ಧರ್ಮಸೂಕ್ಷ್ಮವನ್ನು ಅರಿಯುವುದಾದರೂ ಹೇಗೆ? ಅದಕ್ಕಾಗಿಯೇ ರಾಮನನ್ನು ಆ ರೀತಿ ನಿಂದಿಸುತ್ತಾನೆ ಎಂಬುದು ಇಲ್ಲಿ ಕವಿಯ ಹೃದ್ಗತ ಅಭಿಪ್ರಾಯ

ಅನಂತರ ಕವಿಯು ಧರ್ಮದ ತಿರುಳನ್ನೇ ಹಿಡಿದು ವಾಲಿ ವಧೆಯ ಸಮರ್ಥಕ ಮಾತುಗಳನ್ನು ರಾಮನಿಂದ ಆಡಲ್ಪಟ್ಟಂತೆ ಚಿತ್ರಿಸಿದ್ದಾನೆ ಇದೇ ರಾಮನ ವ್ಯಕ್ತಿತ್ವಕ್ಕೂ, ವಾಲಿಯ ವ್ಯಕ್ತಿತ್ವಕ್ಕೂ ಇರುವ ಅಂತರ. ಕ್ಷಾತ್ರ ವಂಶವು ಧರ್ಮರಕ್ಷಣೆಗಾಗಿ ನಿಗ್ರಹಾನುಗ್ರಹ ಕಾರ್ಯವನ್ನು ಮಾಡುತ್ತದೆ. ಧರ್ಮ ಬಾಹಿರರನ್ನು ಶಿಕ್ಷಿಸುವುದು ಸಮಸ್ತ ವಸುಂಧಾಪತಿತ್ವವನ್ನು ಪಡೆದ ಇಕ್ಷ್ವಾಕು ವಂಶದವರ ಕರ್ತವ್ಯ. ರಾಜನಾದವನು ಧರ್ಮ ಬಾಹಿರನನ್ನು ದಂಡಿಸದೇ ಇದ್ದಲ್ಲಿ ಆ ಪಾಪಕ್ಕೆ ತಾನೇ ಭಾಗಿಯಾಗುತ್ತಾನೆ ಎಂಬ ರಾಜಧರ್ಮವನ್ನು ಕವಿ ಇಲ್ಲಿ ಹೇಳಿದ್ದಾನೆ "ಭರತಸ್ತು ಮಹೀಪಾಲೋ ವಯಂ ತ್ವಾದೇಶವರ್ತಿನಃ" (ಕಿ. ಕಾ. ಸ 18 ಶ್ಲೋ 23) ಎಂಬ ಮಾತಿನಂತೆ ವನವಾಸದಲ್ಲಿದ್ದ ಮಾತ್ರಕ್ಕೆ ರಾಮನು ಅಧರ್ಮವನ್ನು ಸಹಿಸಿಕೊಂಡಿರಬೇಕಾಗಿಲ್ಲವೆಂದು ಇದರಿಂದ ತಿಳಿಯುತ್ತದೆ.

ಇನ್ನು ವಾಲಿಯು ಅಧರ್ಮಾಚರಣೆಯೇನು ಎಂದರೆ ಭ್ರಾತೃ ಭಾರ್ಯಾಗಮನವೆಂಬುದು. ಏಕೆಂದರೆ ಜ್ಯೇಷ್ಠ ಭ್ರಾತೃವು ಪಿತೃಸಮಾನ. ಅಂದಮೇಲೆ ತಮ್ಮನ ಪತ್ನಿಯು ತನಗೆ ಸೊಸೆಯ ಅಥವಾ ಮಗಳ ಸ್ಥಾನದಲ್ಲಿ ಇರುವವಳೆಂದಾಯಿತು ಅಂಥಾ ಸುಗ್ರೀವನ ಪತ್ನಿ ರುಮೆಯನ್ನು ತಂದಿಟ್ಟುಕೊಂಡು ತನ್ನ ಕಾಮುಕತನವನ್ನು ಪ್ರದರ್ಶಿಸಿರುವುದು ಅಧರ್ಮಾಚರಣೆಯ ಪರಾಕಾಷ್ಠೆ. ಪರದಾರಾಭಿಮರ್ಶನವೆಂಬುದು ಮಹಾಪಾತಕ. ಅದರಿಂದಲೇ ರಾಮಾಯಣವಾಯಿತು. ಪತಿವ್ರತೆಯಾದ ಸೀತೆಯನ್ನು ಕೇವಲ ಅಪಹರಿಸಿದ ಅಧರ್ಮಕ್ಕೆ ದಂಡರೂಪವಾಗಿ ಬಂದ ರಾವಣನ ವಧೆಯು ಸಂಗತವೆಂದಾದರೆ, ತಮ್ಮನ ಹೆಂಡತಿಯನ್ನು ಭೋಗಿಸಿದ ವಾಲಿಯು ವಧೆಯು ಹೇಗೆ ಅಸಂಗತವಾದೀತು? ಇಲ್ಲಿ ಕವಿಯು ಧರ್ಮ ಸೂಕ್ಷ್ಮವನ್ನು ರಾಮನ ಮಾತಿನಲ್ಲಿ ಈ ರೀತಿ ಸೂಚಿಸಿದ್ದಾನೆ :—

ನ ಚಕೇ ಮರ್ಷಯೇ ಪಾಪಂ
ಕ್ಷತ್ರಿಯೋಽಹಂ ಕುಲೋದ್ಗತಃ ।
ಔರಸೀಂ ಭಗಿನೀಂ ವಾಪಿ
ಭಾರ್ಯಾಂ ವಾಪ್ಯನುಜಸ್ಯ ಯಃ ॥
ಪ್ರಚರೇತ ನರಃ ಕಾಮಾತ್
ತಸ್ಯದಂಡೋ ವಧಃ ಸ್ಮೃತಃ ।
(ಕಿ ಕಾ ಸ. 18 ಶ್ಲೋ 22,23)

ಇಲ್ಲಿ 'ಸ್ಮೃತಃ' ಎಂಬ ಶಬ್ದದಿಂದ ಮೇಲೆ ಹೇಳಿದ ಅಧರ್ಮಾಚರಣೆಗೆ ದಂಡವಾಗಿ ವಧೆಯು ಸ್ಮೃತಿಯಲ್ಲಿ ಹೇಳಲ್ಪಟ್ಟದೆ ಎಂದು ಅರ್ಥ. ಅಂದರೆ ರಾಮನ ಕಾರ್ಯವು ಸ್ಮೃತ್ಯುಕ್ತ ಆಚರಣೆಗೆ ಅನುಗುಣವಾಗಿದೆ ಎಂದೇ ಅಭಿಪ್ರಾಯ ಅಲ್ಲದೆ ಕೊಟ್ಟವಚನ ಪರಿಪಾಲನೆಯು ಇಕ್ಷ್ವಾಕು ರಾಜಧರ್ಮವಾಗಿರುವುದರಿಂದ ಸುಗ್ರೀವನಿಗೆ ಕೊಟ್ಟ ಮಾತಿನಂತೆ ನಡೆದ ವಾಲಿ ವಧೆಯು ರಾಜಧರ್ಮ ಪರಿಪಾಲನೆಯೇ ಆಗಿದೆ. ವಾಲಿ ವಧಾರ್ಹನೇ ಎಂದಾದರೂ ಮರೆಯಲ್ಲಿ ನಿಂತು ಹೊಡೆದುದು ಅನ್ಯಾಯವೇ ಅಲ್ಲವೇ? ಎಂದರೆ ಮೇಲು ನೋಟಕ್ಕೆ ಹಾಗೆಂದು ತೋರುತ್ತದೆ. ಆದರೆ ಕವಿಗೆ ಇಲ್ಲಿ ತನ್ನ ಕಥಾನಾಯಕನ ಉದ್ದೇಶವು ಪ್ರಧಾನವೇ ಹೊರತು ಅದರ ಆಚರಣೆಯ ಕ್ರಮ ಪ್ರಧಾನವಲ್ಲ ಧರ್ಮ ಬಾಹಿರನನ್ನು ಶಿಕ್ಷಿಸುವುದು ಆತನ ಕರ್ತವ್ಯ ಅದನ್ನು ಕವಿ ಯಥಾವತ್ತಾಗಿ ಚಿತ್ರಿಸಿದ್ದಾನೆ. ಹಾಗೂ ಆಕ್ರಮ ಸರಿಯಲ್ಲವೆಂಬ ಸಂಶಯ ಬಂದರೆ ಅದಕ್ಕೆ ಸಮಾಧಾನವಾಗಿ ರಾಮ ವಾಲಿಯು ಮಾತನ್ನೇ ಅನುಸರಿಸಿ ಹೇಳುವಂತೆ ಚಿತ್ರಿಸಿದ್ದಾನೆ. ಹೇಗೆಂದರೆ :—

ನಮೇತತ್ರ ಮನಸ್ತಾಪೊ
ನಮನ್ಯುರ್ ಹರಿ ಪುಂಗವ
... .. ... ... ...
... ... ... ... ...
... ... ... ... ...
... ... ... ... ..
ಅಯುಧ್ಯನ್ ಪ್ರತಿಯುಧ್ಯನ್ ವಾ
ಯಸ್ಮಾತ್ ಶಾಖಾಮೃಗೋಹ್ಯಸಿ ।
(ಕಿ.ಕಾ.ಸ. 18 ಶ್ಲೋ, 37, 38, 39 40)

ಆದರಂತೆ "ಪಂಚ ನಖಗಳಲ್ಲಿ ನೀನು ಸೇರಿಲ್ಲ. ರಾಜರು ಬೇಟೆಯಲ್ಲಿ ಓಡಿಸಿಕೊಂಡೋ, ಹೆದರಿಸಿಯೋ, ಮರೆಯಲ್ಲಿಯೋ ನಿಂತು ಹೊಡೆದು ಕೊಲ್ಲುವುದು ಮೃಗಯಾಧರ್ಮ. ನೀನೊಂದು ಶಾಖಾಮೃಗ" ಎನ್ನುತ್ತಾನೆ ಈ ಎಲ್ಲ ಕಾರಣಗಳನ್ನು ಅವಲೋಕಿಸಿದಾಗ ವಾಲಿ ವಧಾರ್ಹನೆಂಬುದರಲ್ಲಿ ಸಂಶಯವಿಲ್ಲ ಅಲ್ಲದೆ ಸಮಾನ ದುಃಖಿಗಳಾದ ರಾಮಸುಗ್ರೀವರು ಅಗ್ನಿಸಾಕ್ಷಿಯಾಗಿ ಮೈತ್ರಿಯನ್ನು ಮಾಡಿಕೊಂಡಮೇಲೆ ಸುಗ್ರೀವನ ದುಃಖವೂ ರಾಮನ ದುಃಖವೇ, ಸುಗ್ರೀವನ ಶತ್ರುವೂ ರಾಮನ ಶತ್ರುವೇ, ಎಂದು ಭಾವಿಸುವುದೇ ಸರಿ ಇದೇ ಮಿತ್ರಧರ್ಮ. ಅದುದರಿಂದ ದುಷ್ಟನಿಗ್ರಹರೂಪ ರಾಮಾವತಾರದ ಉದ್ದೇಶವನ್ನು ಕವಿ ಹೇಳಿರುವುದರಿಂದ ಧರ್ಮಬಾಹಿರನ ನಿಗ್ರಹವು ಧರ್ಮಸಮ್ಮತವಾಗಿರುವುದರಿಂದಲೂ ವಾಲಿ ವಧೆಯು ಸರ್ವಥಾ ಸಂಗತವೇ ಆಗಿದೆ.

ಇದರಿಂದ ರಾಮನ ಚಾರಿತ್ರ್ಯಕ್ಕೆ ಲವಲೇಶವೂ ಧಕ್ಕೆಯಾಗುವುದಿಲ್ಲ. ನಾವು ಕವಿ ಹೃದಯವನ್ನು ಧರ್ಮಸೂಕ್ಷ್ಮವನ್ನೂ ತಿಳಿಯದೇ ಮೇಲುನೋಟಕ್ಕೆ ಕಾಣಬರುವ ಅರ್ಥವನ್ನು ಸ್ವೀಕರಿಸಿ ಪೂರ್ವಾಪರ ವಿಮರ್ಶಿಸದೆ ಈಗಿನ ಸಾಮಾಜಿಕ, ಧಾರ್ಮಿಕ ಮುಂತಾದ ಪದ್ಧತಿಗಳಿಂದ ಪ್ರಭಾವಿತರಾಗಿ ಆ ದೃಷ್ಟಿಯಿಂದಲೇ ಅಂದಿನ ಕಾಲದ ಸ್ಥಿತಿಗತಿಗಳನ್ನು ಪರಿಶೀಲಿಸಿದರೆ ಅದು ನಮ್ಮ ಬಾಲಿಶತನದ ಪ್ರದರ್ಶನವಾಗುವುದೇ ಹೊರತು ಕವಿಯ ಅಭಿಪ್ರಾಯಕ್ಕಾಗಲೀ ರಾಮನ ಚಾರಿತ್ರ್ಯಕ್ಕಾಗಲೀ ಚ್ಯುತಿ ಬರಲಾರದು.

★

# ತಿ.ತಿ.ದೇ. ಧರ್ಮಕರ್ತರ ಮಂಡಳಿ ತೀರ್ಮಾನಗಳು 20—8—88

* ಮೇದಕ್ ಜಿಲ್ಲೆಯ ಸಂಗಾರೆಡ್ಡಿ ಬಳಿಯ ಕಲುವ ಗುಂಟಪಲ್ಲಿ, ಶ್ರೀಮತಿ ಡಿ. ವಿ. ವಿಜಯಲಕ್ಷ್ಮಿ ಅವರು ತಿ. ತಿ. ದೇ. ಗಳಿಗೆ ದಾನ ನೀಡಿದ ಭೂಮಿಯಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನು ನಿರ್ಮಿಸಬೇಕೆಂದು ತೀರ್ಮಾನಿಸಲಾಯಿತು.

* ತಿರುಮಲೆಯಲ್ಲಿ 110 ಕಿಲೋವ್ಯಾಟ್ ಸಾಮರ್ಥ್ಯದ 5 ಗಾಳಿ ವಿದ್ಯುತ್ ಉತ್ಪಾದನಾ ಯಂತ್ರಗಳನ್ನು ಸ್ಥಾಪಿಸಲು ಆಗುವ ಅಂದಾಜು ವೆಚ್ಚದಲ್ಲಿ (ರೂ–86, 56, 289) ಭಾರತ ಸರ್ಕಾರದವರು 60.50 ಲಕ್ಷ ರೂಗಳನ್ನು ಮಂಜೂರು ಮಾಡಿರುವುದರಿಂದ, ಮಿಕ್ಕ ಹಣವನ್ನು ಎಂದರೆ ರೂ 26, 06, 289 ಗಳನ್ನು ತಿ. ತಿ. ದೇ. ಗಳು ಮಂಜೂರು ಮಾಡಬೇಕೆಂದು ತೀರ್ಮಾನಿಸಲಾಯಿತು.

* ತಿರುಮಲೆಯಲ್ಲಿ ಸ್ಥಾಪಿಸಲು ಯೋಜಿಸಲಾಗಿರುವ ಧರ್ಮಪ್ರಚಾರ ಪರಿಷತ್‌ಗಾಗಿ ನೀರಿನ ಸೌಲಭ್ಯವನ್ನು ಒದಗಿಸಲು 12.85 ಲಕ್ಷ ರೂಗಳನ್ನು ಮಂಜೂರು ಮಾಡಬೇಕೆಂದು ತೀರ್ಮಾನಿಸಲಾಯಿತು.

* ತಿರುಪತಿಯ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾನಿಲಯದ ವಾರ್ಷಿಕ ವೆಚ್ಚಗಳಿಗಾಗಿ 12 ಲಕ್ಷ ರೂಗಳನ್ನು 1988 –89ರ ಸಾಲಿನಲ್ಲಿ ನೀಡಲು ತೀರ್ಮಾನಿಸಲಾಯಿತು.

* ತಿರುಪತಿಯ ಎಸ್. ವಿ. ಪ್ರೌಢಶಾಲೆಯ ವಿದ್ಯಾರ್ಥಿ ಚಿ॥ ವೈ. ಜಗದೀಶ್ವರರೆಡ್ಡಿ ಹತ್ತನೇ ತರಗತಿಯ ಪರೀಕ್ಷೆಗಳಲ್ಲಿ ರಾಜ್ಯಮಟ್ಟದ ಆರನೇ ರ್‍ಯಾಂಕ್ ಪಡೆದದ್ದರಿಂದ ಅಭಿನಂದನೆಯ ಕುರುಹಾಗಿ, 5 ಗ್ರಾಂ ಬಂಗಾರದ ಪದಕವನ್ನು ನೀಡಿದ್ದನ್ನು ಅನುಮೋದಿಸಲು ತೀರ್ಮಾನಿಸಲಾಯಿತು.

* ತಿರುಪತಿಯ ಶ್ರೀ ಪದ್ಮಾವತೀ ಮಹಿಳಾ ಕಾಲೇಜಿನಲ್ಲಿ ಹೆಚ್ಚಿದ ಶಿಕ್ಷಣಾರ್ಥಿಗಳ ಬೇಡಿಕೆಯನ್ನು ಪೂರೈಸಲು ಬಿ.ಎ; ಬಿ ಕಾಂ, ಬಿ.ಎಸ್ ಸಿ. ಪದವಿ ತರಗತಿಗಳಿಗೆ ಹೆಚ್ಚಿನ ವಿದ್ಯಾರ್ಥಿಗಳನ್ನು 1988–89 ರ ಸಾಲಿಗೆ ಸೇರಿಸಿಕೊಂಡದ್ದನ್ನು ಅನುಮೋದಿಸಲು ತೀರ್ಮಾನಿಸಲಾಯಿತು.

* ದಿನವೂ ಶಾಲೆ ಆರಂಭವಾಗುವುದಕ್ಕೆ ಮುನ್ನ ಪ್ರಾರ್ಥನೆಯ ಪದ್ಧತಿಯನ್ನು ಪ್ರವೇಶಗೊಳಿಸಬೇಕೆಂಬ ಶ್ರೀ ಎಲ್. ವಿ. ರಾಮಯ್ಯ ಅವರ (ಧರ್ಮಕರ್ತರ ಮಂಡಳಿ ಸದಸ್ಯರು) ತಿ.ತಿ.ದೇ. ಗಳು ನಡೆಸುತ್ತಿರುವ ಶಾಲೆಗಳಲ್ಲಿ ಮೊದಲಿಗೆ ಪ್ರವೇಶಗೊಳಿಸಲು ತೀರ್ಮಾನಿಸಲಾಯಿತು.

* ಕಾಡೆಪಲ್ಲಿಗೂಡೆಂನಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪವನ್ನು ನಿರ್ಮಿಸಲು 19 ಲಕ್ಷ ರೂಗಳ ಅಂದಾಜು ವೆಚ್ಚಕ್ಕೆ ಆಡಳಿತಾತ್ಮಕ ಮಂಜೂರಾತಿ ನೀಡಲು ತೀರ್ಮಾನಿಸಲಾಯಿತು.

* ತಿರುಮಲೆಯ, ಒಳಚರಂಡಿ ಹಾಗೂ ಕಸಗಳಿಂದ ಇಂಧನ ಸಂಪತ್ತನ್ನು ಪಡೆಯುವ ಯೋಜನೆಯನ್ನು ರೂಪಿಸುವ ಕಾರ್ಯವನ್ನು ಅಸಾಂಪ್ರದಾಯಿಕ ಶಕ್ತಿ ಅಭಿವೃದ್ಧಿ ಸಂಸ್ಥೆಯವರಿಗೆ ವಹಿಸಿಕೊಟ್ಟು ಅದಕ್ಕೆ ತಗಲುವ ಪರಿಷ್ಕೃತ ಅಂದಾಜುವೆಚ್ಚ 1,14,400 ರೂಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಯಿತು.

* ತಿರುಮಲೆ, ತಿರುಪತಿಗಳಲ್ಲಿನ ತಿ. ತಿ. ದೇ. ಗಳ ನೀರಿನ ಸೌಲಭ್ಯಗಳ ಕಾರ್ಯಗಳಲ್ಲಿ ಸಲಹೆ ನೀಡಲು, ಈಚೆಗೆ ಸಾರ್ವಜನಿಕ ಆರೋಗ್ಯ ವಿಭಾಗದಿಂದ ನಿವೃತ್ತಗೊಂಡ ಮುಖ್ಯ ಇಂಜನಿಯರ್ ಶ್ರೀ ಕೃಪಾರಾವ್ ಅವರನ್ನು ತಿ. ತಿ. ದೇ. ಜಲ ಪರಿಪೂರಣ ವಿಭಾಗದ ಸಂಬಳವಿಲ್ಲದ ಸಲಹೆಗಾರರನ್ನಾಗಿ ನೇಮಿಸಲು ತೀರ್ಮಾನಿಸಲಾಯಿತು.

## ಬ್ರಹ್ಮೋತ್ಸವ ಸೌಕರ್ಯಗಳು

ತಿರುಮಲೆಯಲ್ಲಿ 10 – 10 – 88 ರಿಂದ 19 – 10 – 88 ರವರೆಗೆ ನಡೆಯುವ ನವರಾತ್ರಿ ಬ್ರಹ್ಮೋತ್ಸವಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ವಿಸ್ತೃತವಾದ ಏರ್ಪಾಡುಗಳನ್ನುಂಟಾಗಿಸಿದೆ.

* ತಿರುಮಲೆಯ ಆರ್ಷಸದನ್ ಹಾಲ್‌ನಲ್ಲಿ ನಡೆಸುತ್ತಿದ್ದ ಹರಿಕಥೆ, ಪುರಾಣ ಪಠಣ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಸ್ವಾಮಿ ಸನ್ನಿಧಿ ಬೀದಿಯ ನೂತನ ಆಸ್ಥಾನ ಮಂಟಪಕ್ಕೆ ಬದಲಾಯಿಸಲಾಗಿದೆ.
* ತಿ ತಿ.ದೇ. ಧಾರ್ಮಿಕ ಪುಸ್ತಕ ಪ್ರದರ್ಶನ–ಮಾರಾಟವನ್ನೂ ಸಹ ಈ ಆಸ್ಥಾನ ಮಂಟಪದಲ್ಲಿ ಇರುವಂತೆ ಮಾಡಲಾಗಿದೆ.
* ಬ್ರಹ್ಮೋತ್ಸವ ಸಮಯದಲ್ಲಿ ತಿರುಮಲೆ ತಿರುಪತಿಗಳ ಮಧ್ಯದಲ್ಲಿ ಯಾತ್ರಿಕರ ಪ್ರಯಾಣಕ್ಕಾಗಿ ರಾತ್ರಿಹಗಲು ದೊಡ್ಡ ಸಂಖ್ಯೆಯಲ್ಲಿ ಬಸ್‌ಗಳ ಹೋಗಿ ಬರುವಿಕೆಯ ಏರ್ಪಾಡು.
* ಕಾಲುಹಾದಿಯಲ್ಲಿ ದೊಡ್ಡ ಪ್ರಮಾಣದಲ್ಲಿ ಯಾತ್ರಿಕರಿಗೆ ಭದ್ರತಾ ಏರ್ಪಾಡು. ಪ್ರಥಮ ಚಿಕಿತ್ಸಾ ಕೇಂದ್ರಗಳ ಏರ್ಪಾಡು.
* ಬ್ರಹ್ಮೋತ್ಸವ ಸಮಯದಲ್ಲಿ 10 ಸಾವಿರದಿಂದ 12 ಸಾವಿರ ಮಂದಿಗೆ ಉಚಿತ ಭೋಜನ ಸದುಪಾಯ.
* ಯಾತ್ರಿಕರು ಬೆಟ್ಟದ ಮೇಲೆ ತಂಗಲು ಉಚಿತ, ಬಾಡಿಗೆ–ವಸತಿಗಳ ಏರ್ಪಾಟು.

ಯಾತ್ರಿಕರು ಮೇಲ್ಕಂಡ ಸೌಕರ್ಯಗಳ ಸದ್ವಿನಿಯೋಗ ಪಡೆದು ತಿ.ತಿ.ದೇ. ಗಳೊಡನೆ ಸಹಕರಿಸಬೇಕೆಂದು ವಿನಂತಿಸಲಾಗಿದೆ.

ತಿ.ತಿ.ದೇ.

# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ.

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಸಿ. ಎಚ್. ವೆಂಕಟಪತಿ ರಾಜು, ಐ. ಎ. ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ ;

ಅನ್ನದಾನಕ್ಕಿಂತ ಇನ್ನು ಹೆಚ್ಚಿನ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ, ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನ ಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/– ಅಥವಾ ಅದರ ಗುಣಕಗಳಲ್ಲಿ ದಾನ ಮಾಡಿದರೂ ಸಾಕು ; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನ ಯೋಜನೆಯನ್ನು ತಿ. ತಿ. ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನ ಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ

ಅನ್ನೇ ಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ ।
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ ॥

ಒಳಶಕ್ತಿಯ ಜೀವಸತ್ತ್ವ ಆಹಾರ ಎಂಬು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು. —ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ
ತಮ್ಮ ವಿಶ್ವಾಸಿ,
**(ಸಿ. ಎಚ್. ವೆಂಕಟಪತಿರಾಜು.)**

ನೆಲ್ಲೂರು ಜಿಲ್ಲೆಯ ಅಲ್ಲೂರು ಗ್ರಾಮದಲ್ಲಿ ಸ್ಥಳೀಯರು 1.15 ಸೆಂಟ್ ಭೂಮಿಯನ್ನೂ 75 ಸಹಸ್ರ ರೂಗಳನ್ನೂ ನೀಡಿರುವುದರಿಂದ ಅಲ್ಲಿ ತಿ. ತಿ. ದೇ. ಕಲ್ಯಾಣಮಂಟಪವನ್ನು ಹತ್ತು ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಆಡಳಿತಾತ್ಮಕ ಮಂಜೂರಾತಿ ನೀಡಲು ತೀರ್ಮಾನಿಸಲಾಯಿತು.

* ವಿಶಾಖಪಟ್ಟಂ ಹಾಗೂ ವಿಜಯನಗರಂಗಳಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪಗಳನ್ನು ನಿರ್ಮಿಸಲು ತಗುಲುವ ವೆಚ್ಚಗಳ ಅಂದಾಜು ಪತ್ರವನ್ನು ತಿ. ತಿ. ದೇ. ಇಂಜನೀಯರಿಂಗ್ ವಿಭಾಗ ತಯಾರಿಸಿ, ಟೆಂಡರ್‌ಗಳನ್ನು ಕರೆಯಬೇಕೆಂದೂ, ಕಂಟ್ರಾಕ್ಟರ್‌ಗಳೊಂದಿಗೆ ಒಪ್ಪಂದ ಮಾಡಿಕೊಳ್ಳಬೇಕೆಂದೂ ತೀರ್ಮಾನಿಸಲಾಯಿತು. ನಿರ್ಮಾಣ ಕಾರ್ಯದ ಉಸ್ತುವಾರಿಯನ್ನು 'ವುಡ'ದ ಇಂಜನೀಯರುಗಳು ನೋಡಬೇಕೆಂದು ವಿನಂತಿಸಿಕೊಳ್ಳಲೂ, ತಿ. ತಿ. ದೇ. ಗಳ ಹತ್ತು ಲಕ್ಷರೂಗಳನ್ನು ವುಡದ ಹೆಸರಲ್ಲಿಟ್ಟು ನಿರ್ಮಾಣ ವೆಚ್ಚಗಳಿಗಾಗಿ ವಿನಿಯೋಗಿಸಬೇಕೆಂದೂ ಅವರನ್ನು ಕೇಳಲು ತೀರ್ಮಾನಿಸಲಾಯಿತು. ಈ ಹಣ ವೆಚ್ಚವಾದನಂತರ ತಿ. ತಿ. ದೇ. ಮತ್ತೆ ಹಣವನ್ನು ಮಂಜೂರು ಮಾಡಬೇಕೆಂದೂ ತೀರ್ಮಾನಿಸಲಾಯಿತು.

* ಕಪಿಲತೀರ್ಥದ ರಸ್ತೆಯಲ್ಲಿರುವ ತೀರ್ಥಂ ನಮ್ಮಾಳ್ವಾರ್ ದೇವಾಲಯದ, ದುರಸ್ತಿ, ಜೀರ್ಣೋದ್ಧಾರದ ಕೆಲಸಗಳನ್ನು ಜಿಯಂಗಾರ್ ಅವರ ಕೋರಿಕೆಯ ಮೇರೆಗೆ 6 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ಕೈಗೆತ್ತಿಕೊಳ್ಳಬೇಕೆಂದು ತೀರ್ಮಾನಿಸಲಾಯಿತು.

*



# ವಾರ್ತಾಲಹರಿ

## ಯಶಸ್ವಿ ಬ್ರಹ್ಮೋತ್ಸವಗಳು

ತಿರುಮಲೆಯಲ್ಲಿ ಈ ಬಾರಿಯ ವಾರ್ಷಿಕ ಬ್ರಹ್ಮೋತ್ಸವಗಳು 13-9-88 ರಿಂದ 22-9-88 ರವರೆಗೆ ವಿಜೃಂಭಣೆಯಿಂದ ನಡೆದು ಯಶಸ್ವಿಯಾದವು.

ಬ್ರಹ್ಮೋತ್ಸವದ ದಿನಗಳಲ್ಲಿ ಹೆಚ್ಚುವ ಜನ ಸಂದಣಿಯ ಕನಿಷ್ಟ ಸೌಕರ್ಯಗಳನ್ನು ಗಮನಿಸಲು ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಅವರ ನೇತೃತ್ವದಲ್ಲಿ ವಿಶೇಷವಾದ ವ್ಯವಸ್ಥೆಯನ್ನು ಏರ್ಪಡಿಸಲಾಗಿದ್ದಿತು. ರೈಲ್ವೆ ಇಲಾಖೆ ಬ್ರಹ್ಮೋತ್ಸವದ ದಿನಗಳಲ್ಲಿ ತಿರುಪತಿಗೆ ವಿವಿಧ ಸ್ಥಳಗಳಿಂದ ಬರುವ ಯಾತ್ರಿಕರ ಅನುಕೂಲಕ್ಕಾಗಿ ಹೆಚ್ಚಿನ ಕೋಚುಗಳನ್ನು ಈಗಿರುವ ರೈಲುಗಳಿಗೇ ಜೋಡಿಸಿದ್ದರು. ಪರ ಊರುಗಳಿಂದ ತಿರುಪತಿಗೂ, ತಿರುಪತಿಯಿಂದ ತಿರುಮಲೆಗೂ ಹೆಚ್ಚಿನ ಬಸ್ ಸೌಲಭ್ಯವನ್ನು ಒದಗಿಸಲಾಗಿದ್ದಿತು. ತಿರುಮಲೆಯ ಶಾಂತಿ ಭದ್ರತೆಗಳಿಗೆ ವಿಶೇಷ ಪೋಲೀಸ್ ಪಡೆ, ಗೃಹರಕ್ಷಕದಳದ ಏರ್ಪಾಡಾಗಿದ್ದಿತು. ಶುಭ್ರತೆ, ನೈರ್ಮಲ್ಯಗಳ ಸಂರಕ್ಷಣೆಗಾಗಿ ಹೆಚ್ಚಿನ ಆರೋಗ್ಯ ಸಿಬ್ಬಂದಿಯನ್ನು ನಿಯಮಿಸಲಾಗಿದ್ದಿತು.

ಇಡೀ ತಿರುಮಲೆಯಲ್ಲಿ ಬ್ರಹ್ಮೋತ್ಸವದ ದಿನಗಳಲ್ಲಿ ಹೂವಿನ ಸುಗಂಧ, ಅಲಂಕಾರ, ರಾತ್ರಿಗಳಲ್ಲಿ ವರ್ಣರಂಜಿತ ವಿದ್ಯುದ್ದೀಪ ಅಲಂಕಾರಗಳು ಎಲ್ಲರನ್ನೂ ಆಕರ್ಷಿಸಿದ್ದವು. ಈ ಬಾರಿ ಫಲ ಪುಷ್ಪ ಪ್ರದರ್ಶನವನ್ನೂ ಏರ್ಪಡಿಸಿದ್ದು ತಿ.ತಿ.ದೇ. ತೋಟಗಾರಿಕೆ ಇಲಾಖಾಧಿಕಾರಿ ಶ್ರೀ ತಮ್ಮಣ್ಣ ಅವರ ನೇತೃತ್ವದಲ್ಲಿ ಈ ಪ್ರದರ್ಶನ ಯಾತ್ರಿಕರನ್ನು ಆಕರ್ಷಿಸುವಲ್ಲಿ ಯಶಸ್ವಿಯಾಯಿತು. ಯಾತ್ರಿಕರ ಭಗವತ್ ಚಿಂತನಾವಕಾಶವನ್ನು ಹೆಚ್ಚಿಸಲೆಂಬಂತೆ ಧಾರ್ಮಿಕ ಸಂಗೀತ, ನೃತ್ಯ, ಪುರಾಣವಾಚನ, ಹರಿಕಥೆ ಮೊದಲಾದ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿದ್ದಿತು. ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರು - ಸರ್ವಶ್ರೀ ನಾಗೇಶ್ವರ ರಾವ್ ನಾಯುಡು, ಪಿ. ಎಸ್. ರಂಗನಾಥ್ ಮೊದಲಾದವರ ಸಂಕೀರ್ತನ ಸಭೆಯೊಡನೆ, ಸರ್ವಶ್ರೀ ಲಾಲ್‌ಗುಡಿಜಯರಾಮನ್, ಎನ್. ರಮಣಿ, ಟಿ ಎನ್. ಕೃಷ್ಣನ್, ಶಂಕರ ನಾರಾಯಣನ್. ಮೆಂಡೋಲಿನ್ ಶ್ರೀನಿವಾಸ್ ಅವರ ವಾದ್ಯಗೋಷ್ಠಿಗಳೂ ಶ್ರೀಮತಿಯರಾದ ಟಿ. ಟಿ. ಗೀತ, ರಾಧಾಜಯಲಕ್ಷ್ಮಿ, ಶೋಭಾರಾಜು, ಮಾಲತೀ ಪದ್ಮನಾಭರಾವ್ ಅವರುಗಳ ಸಂಗೀತಗೋಷ್ಠಿಗಳೂ ಸೇರಿ ತಿರುಮಲೆಯಲ್ಲಿ ಸಂಗೀತದ ಸಮಾರಾಧನೆಯೇ ನಡೆಯಿತು.

ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆಯ ಉಚಿತ ಭೋಜನ ಸೌಲಭ್ಯವನ್ನು 12,000 ಮಂದಿಗೆ ವಿಸ್ತರಿಸಿದ್ದರಿಂದ ಹೆಚ್ಚಿನ ಯಾತ್ರಿಕರಿಗೆ ಅಶನದ ಯೋಚನೆ ತಪ್ಪಿ ಭಗವದ್ಧ್ಯಾನದಲ್ಲಿ ನಿರತರಾಗಲು ಹೆಚ್ಚು ಅನುಕೂಲವಾಯಿತು.

ಗರುಡಸೇವೆಯಂದು ಹಿಂದೆಂದೂ ಇಲ್ಲದಷ್ಟು ಆನಂದ ಸಂಭ್ರಮ. ಅಂದು ಸ್ವಾಮಿಯವರ ಮಕರ ಕಂಠಿಹಾರ, ಲಕ್ಷ್ಮೀಹಾರಗಳನ್ನು ಉತ್ಸವ ಮೂರ್ತಿ ಧರಿಸಿಕೊಂಡು ಊರಮೆರವಣಿಗೆ ಬರುತ್ತಾರೆ. ಅಲಂಕಾರಪುರುಷೋತ್ತಮನನ್ನು ನೋಡಲು ಜನ ಹೆಚ್ಚು ಹೆಚ್ಚು ಉತ್ಸಾಹದಿಂದ ಬೀದಿಮರಿಯುವರು. ಅಂದು ಸ್ವಾಮಿದರ್ಶನಕ್ಕೆ ಬಂದವರ ಸಂಖ್ಯೆ 60,000 12 ಸಹಸ್ರಕ್ಕೂ ಹೆಚ್ಚಿನ ಜನ 25 ರೂಗಳ ವಿಶೇಷ ಪ್ರವೇಶದ ಟಿಕೆಟ್ ಪಡೆದರು. 1987 ರ ಬ್ರಹ್ಮೋತ್ಸವದ ಗರುಡ ಸೇವೆಯ ದಿನ 11 ಲಕ್ಷ ರೂಗಳ ಆದಾಯವಿದ್ದದ್ದು ಈ ಬಾರಿ ಅಂದು 15 ಲಕ್ಷಕ್ಕೂ ಮೀರಿದ್ದಿತು. 607500ರೂಗಳು ಹುಂಡಿಯಿಂದಲೂ 608562 ರೂಗಳು ಪ್ರಸಾದ ಮಾರಾಟದಿಂದಲೂ, 3,23,400 ರೂಗಳು ಸೇವೆಗಳ ರೂಪದಲ್ಲೂ ಬಂದವು ಎಂದು ವರದಿಯಾಗಿದೆ.

16–9–88 ರ ಬೆಳಗ್ಗೆ ಆಂಧ್ರಪ್ರದೇಶದ ಮುಜರಾಯಿ ಇಲಾಖಾಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ತಿರುಮಲೆಗೆ ಆಗಮಿಸಿದ್ದರು. ಚಿತ್ತೂರಿನ ಜಿಲ್ಲಾಧಿಕಾರಿ ಶ್ರೀ ಸಿ. ವಿಶ್ವನಾಥ್ ಅವರೊಂದಿಗೆ ಸೇರಿ ಸ್ವಾಮಿಯ ಸಿಂಹವಾಹನೋತ್ಸವದಲ್ಲಿ ಪಾಲುಗೊಂಡಿದ್ದರು.

ಗರುಡ ಸೇವೆಯಂದು ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್. ಟಿ. ರಾಮರಾಯರು ತಿರುಮಲೆಗೆ ಆಗಮಿಸಿದ್ದರು. ಸರ್ಕಾರದ ಪರವಾಗಿ ಸ್ವಾಮಿಗೆ ರೇಷ್ಮೆ ವಸ್ತ್ರಗಳನ್ನು ತಲೆಯ ಮೇಲೆ ಹೊತ್ತು ತಂದು ಒಪ್ಪಿಸಿದರು. ಅಂದೇ ಅವರು ತಿರುಮಲೆಯಲ್ಲಿ ನಿರ್ಮಿತವಾದ ಹೊಸ ಬಸ್ ನಿಲ್ದಾಣವನ್ನು ಉದ್ಘಾಟಿಸಿದರು. ಆಧುನಿಕ ಸೌಲಭ್ಯಗಳನ್ನು ಒಳಗೊಂಡ ಈ ಹೊಸ ಬಸ್‌ಸ್ಟ್ಯಾಂಡಿನಲ್ಲಿ ಸಧ್ಯಕ್ಕೆ 20 ಬಸ್‌ಗಳು ಒಟ್ಟಿಗೆ ನಿಲ್ಲಬಹುದು. ಮುಖ್ಯಮಂತ್ರಿ ತಿರುಮಲೆಯಲ್ಲಿ ನಿರ್ಮಿಸಲಾಗುವ ವೇದವಿಜ್ಞಾನ ಪರಿಷತ್‌ಗೂ ಅಂದು ಶಿಲಾನ್ಯಾಸ ಮಾಡಿದರು. ಇದರ ನೆನಪಿನಲ್ಲಿ ಒಂದು ಸಸಿಯನ್ನೂ ಅಲ್ಲಿ ನೆಟ್ಟರು. 1 4 ಕೋಟಿ ರೂಗಳಲ್ಲಿ ನಿರ್ಮಿಸಲಾಗಿರುವ ಸಪ್ತಗಿರಿ ಸತ್ರಗಳನ್ನು ಉದ್ಘಾಟನೆ ಮಾಡಿದರು. ಈ ಸತ್ರಗಳಲ್ಲಿನ ಕೋಣೆಗಳಿಂದಾಗಿ ಯಾತ್ರಿಕರಿಗೆ ಹೆಚ್ಚಿನ ವಸತಿಸೌಲಭ್ಯ ದಕ್ಕುವಂತೆ ಆಗುತ್ತದೆ. (ಚಿತ್ರಗಳನ್ನು ರಕ್ಷಾಪತ್ರದ ಒಳಬದಿ–1 ರಲ್ಲಿ ಕಾಣಬಹುದು)

ತಿ. ತಿ. ದೇ. ಗಳ ಧಾರ್ಮಿಕ ಸಾಹಿತ್ಯ ಕೃತಿಗಳನ್ನು ರಿಯಾಯಿತಿ ದರಗಳಲ್ಲಿ ಬ್ರಹ್ಮೋತ್ಸವದ ದಿನಗಳಲ್ಲಿ ಮಾರಾಟ ಮಾಡಲಾಯಿತು. ಯಾತ್ರಿಕರು ಅತಿ ಉತ್ಸಾಹದಿಂದ ಕೊಂಡು ಓದುವುದು ಕಂಡುಬಂದಿತು.

## ತಿ. ತಿ. ದೇ. ಆಡಳಿತದ ಪರಿಧಿಗೆ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ದೇವಾಲಯ

ತಿರುಪತಿಗೆ 25 ಕಿಲೋಮೀಟರ್ ದೂರದಲ್ಲಿ ಪುತ್ತೂರಿನ ಬಳಿಯಿರುವ ಅಪ್ಪಲಾಯನಗುಂಟದ ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ದೇವಾಲಯದ ಆಡಳಿತದ ಹೊಣೆಯನ್ನು ತಿ. ತಿ. ದೇವಸ್ಥಾನಗಳು ಸ್ವೀಕರಿಸಿದೆ.

ಶುಕ್ರವಾರ ದಿನಾಂಕ 23-9-88 ರಂದು ಸದರಿ ದೇವಾಲಯದಲ್ಲಿ ನಡೆದ ಸಮಾರಂಭದಲ್ಲಿ, ಆಂಧ್ರಪ್ರದೇಶದ ಮಂತ್ರಿದ್ವಯರು ಶ್ರೀ ಗಾಲಿ ಮುದ್ದುಕೃಷ್ಣಮನಾಯುಡು ಮತ್ತು ಶ್ರೀ ಸಿಂಹಾದ್ರಿ ಸತ್ಯನಾರಾಯಣ, ಹಾಗೂ ತಿ. ತಿ. ದೇ. ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ದೇವಿನೇನಿ ಸೀತಾರಾಮಯ್ಯ ಮತ್ತು ಇತರರ ಸಮಕ್ಷಮದಲ್ಲಿ, ಆಡಳಿತದ ವರ್ಗಾವಣೆಯ ಸಂಕೇತವಾಗಿ, ದೇವಾಲಯದ ಬೀಗದ ಕೈಗಳನ್ನು, ಸ್ಥಳೀಯ ದೇವಾಲಯದ ಧರ್ಮಕರ್ತರ ಮಂಡಳಿಯ ಅಧ್ಯಕ್ಷ ಶ್ರೀ ಅಯ್ಯಪು ರೆಡ್ಡಿ ಅವರು ತಿ.ತಿ. ದೇ.ಕಾರ್ಯ ನಿರ್ವಹಣಾಧಿಕಾರಿ ಶ್ರೀ ಸಿ. ಎಚ್. ವೆಂಕಟಪತಿರಾಜು ಅವರಿಗೆ ಒಪ್ಪಿಸಿದರು.

ಶ್ರೀ ಪ್ರಸನ್ನ ವೆಂಕಟೇಶ್ವರ ಸ್ವಾಮಿ ದೇವಾಲಯದ ಉತ್ಸವ ವಿಗ್ರಹಗಳನ್ನು ಅಪ್ಪಲಾಯಲಾಯನಗುಂಟದ ಮುಖ್ಯ ಬೀದಿಗಳಲ್ಲಿ ಮೆರವಣಿಗೆಯಲ್ಲಿ ತೆಗೆದು ಕೊಂಡು ಹೋಗಲಾಯಿತು.

ನಾರಾಯಣ ವನದಲ್ಲಿ ಶ್ರೀ ಪದ್ಮಾವತೀ ದೇವಿಯನ್ನು ವಿವಾಹದ ನಂತರ ಶ್ರೀ ವೆಂಕಟೇಶ್ವರ ಸ್ವಾಮಿಯು ಶ್ರೀನಿವಾಸ ಮಂಗಾಪುರ, ಶ್ರೀವಾರಿ ಮೆಟ್ಟುಗಳ ಮೂಲಕ ತಿರುಮಲೆಯನ್ನು ತಲುಪುವ ಮೊದಲು ಇಲ್ಲಿ ತಂಗಿದ್ದನೆಂದು ವಿವರಿಸುವ ಸ್ಥಳ ಪುರಾಣ ವಿವರದ ಫಲಕವನ್ನು ತಿ. ತಿ. ದೇ. ಗಳ ಪರವಾಗಿ ವಿಶೇಷ ದರ್ಜೆಯ ಡೆಪ್ಯೂಟಿ ಇ. ಓ. ಶ್ರೀ ಆರ್ ವಾಸುದೇವ ನಾಯುಡು ಅವರು ಅನಾವರಣ ಗೊಳಿಸಿದರು.

ತಿ. ತಿ. ದೇ. ಗಳ ವಿವಿಧ ಶಾಖೆಗಳು – ಇಂಜನಿಯರಿಂಗ್, ಆರೋಗ್ಯ, ವಿದ್ಯುತ್, ಉಪವನ, ಪೋಟು, ಅನ್ನಮಾಚಾರ್ಯ ಪ್ರಾಜೆಕ್ಟ್ ಮೊದ

# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ.

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಸಿ. ಎಚ್. ವೆಂಕಟಪತಿ ರಾಜು, ಐ. ಎ. ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೇ;

ಅನ್ನದಾನಕ್ಕಿಂತ ಇನ್ನು ಚೆನ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನ ಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾ ಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/– ಅಥವಾ ಅದರ ಗುಣಕಗಳಲ್ಲಿ ದಾನ ಮಾಡಿದರೂ ಸಾಕು; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನ ಯೋಜನೆಯನ್ನು ತಿ. ತಿ. ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನ ಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ

ಅನ್ನೇ ಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ।
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ॥

ಒಳಶಕ್ತಿಯ ಜೀವಸತ್ತ್ವ ಆಹಾರ ಎಂಬು ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು. —ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ
ತಮ್ಮ ವಿಶ್ವಾಸಿ,
**(ಸಿ. ಎಚ್. ವೆಂಕಟಪತಿರಾಜು.)**

ನೆಲ್ಲೂರು ಜಿಲ್ಲೆಯ ಅಲ್ಲೂರು ಗ್ರಾಮದಲ್ಲಿ ಸ್ಥಳೀಯರು 1.15 ಸೆಂಟ್ ಭೂಮಿಯನ್ನೂ 75 ಸಹಸ್ರ ರೂಗಳನ್ನೂ ನೀಡಿರುವುದರಿಂದ ಅಲ್ಲಿ ತಿ. ತಿ. ದೇ. ಕಲ್ಯಾಣಮಂಟಪವನ್ನು ಹತ್ತು ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಆಡಳಿತಾತ್ಮಕ ಮಂಜೂರಾತಿ ನೀಡಲು ತೀರ್ಮಾನಿಸಲಾಯಿತು.

* ವಿಶಾಖಪಟ್ಟಂ ಹಾಗೂ ವಿಜಯನಗರಂಗಳಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪಗಳನ್ನು ನಿರ್ಮಿಸಲು ತಗುಲುವ ವೆಚ್ಚಗಳ ಅಂದಾಜು ಪತ್ರವನ್ನು ತಿ. ತಿ. ದೇ. ಇಂಜನೀಯರಿಂಗ್ ವಿಭಾಗ ತಯಾರಿಸಿ, ಟೆಂಡರ್‌ಗಳನ್ನು ಕರೆಯಬೇಕೆಂದೂ, ಕಂಟ್ರಾಕ್ಟರ್‌ಗಳೊಂದಿಗೆ ಒಪ್ಪಂದ ಮಾಡಿಕೊಳ್ಳಬೇಕೆಂದೂ ತೀರ್ಮಾನಿಸಲಾಯಿತು. ನಿರ್ಮಾಣ ಕಾರ್ಯದ ಉಸ್ತುವಾರಿಯನ್ನು 'ವುಡ'ದ ಇಂಜನೀಯರುಗಳು ನೋಡಬೇಕೆಂದು ವಿನಂತಿಸಿಕೊಳ್ಳಲೂ, ತಿ. ತಿ. ದೇ. ಗಳ ಹತ್ತು ಲಕ್ಷರೂಗಳನ್ನು ವುಡದ ಹೆಸರಲ್ಲಿಟ್ಟು ನಿರ್ಮಾಣ ವೆಚ್ಚಗಳಿಗಾಗಿ ವಿನಿಯೋಗಿಸಬೇಕೆಂದೂ ಅವರನ್ನು ಕೇಳಲು ತೀರ್ಮಾನಿಸಲಾಯಿತು. ಈ ಹಣ ವೆಚ್ಚವಾದನಂತರ ತಿ. ತಿ. ದೇ. ಮತ್ತೆ ಹಣವನ್ನು ಮಂಜೂರು ಮಾಡಬೇಕೆಂದೂ ತೀರ್ಮಾನಿಸಲಾಯಿತು.

* ಕಪಿಲತೀರ್ಥದ ರಸ್ತೆಯಲ್ಲಿರುವ ತೀರ್ಥಂ ನಮ್ಮಾಳ್ವಾರ್ ದೇವಾಲಯದ, ದುರಸ್ತಿ, ಜೀರ್ಣೋದ್ಧಾರದ ಕೆಲಸಗಳನ್ನು ಜಿಯಂಗಾರ್ ಅವರ ಕೋರಿಕೆಯ ಮೇರೆಗೆ 6 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ಕೈಗೆತ್ತಿಕೊಳ್ಳಬೇಕೆಂದು ತೀರ್ಮಾನಿಸಲಾಯಿತು.

*



# ತಿರುಮಲೆ ತಿರುಪತಿ ದೇವಸ್ಥಾನಗಳು,

## ತಿರುಪತಿ.

## ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನ ಯೋಜನೆ

ಸಿ. ಎಚ್. ವೆಂಕಟಪತಿ ರಾಜು, ಐ. ಎ. ಎಸ್.,
ಕಾರ್ಯನಿರ್ವಹಣಾಧಿಕಾರಿ.

ಪ್ರಿಯ ಭಕ್ತ ಬಂಧುಗಳೆ ;

ಅನ್ನದಾನಕ್ಕಿಂತ ಇನ್ನು ಬೆಸ್ನಾದ ಉನ್ನತವಾದ ದಾನ ಮತ್ತೊಂದಿಲ್ಲ. ಹಸಿದು ಬಂದವರಿಗಶನವೀಯುವುದು ನಮ್ಮ ದೇಶದಲ್ಲಿ ಒಂದು ಸೇವೆ ಮಾತ್ರವೇ ಅಲ್ಲ; ವೇದಕಾಲದಿಂದ ಆಚರಣೆಯಲ್ಲಿರುವ ಪರಂಪರಾಗತ ಧರ್ಮವೂ ಆಗಿದೆ. ಆಹಾರವನ್ನು ನೀಡುವವರು ದೇವತೆಗಳೊಡನೆ ಸ್ಥಾನ ಪಡೆಯುವರೆಂದು ಹೇಳಲಾಗಿದೆ.

ತಿರುಮಲೆ ಯಾತ್ರಿಕರಿಗೆ ಉಚಿತವಾಗಿ ಹಾಗೂ ಪೂರ್ಣವಾಗಿ ಭೋಜನ ನೀಡುವ ಉದ್ದೇಶದಿಂದ 1985 ರಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳಿಂದ ಆರಂಭಿಸಲ್ಪಟ್ಟ, ಶ್ರೀ ವೆಂಕಟೇಶ್ವರ ನಿತ್ಯ ಅನ್ನದಾನಯೋಜನೆಯು ಶೋಭಾಕರವಾದ ಯಶಸ್ಸು ಪಡೆದಿದೆ. ಭಾರತಾದ್ಯಂತದ ದಾನಿಗಳಿಂದ ಈ ಯೋಜನೆಯ ಬಗ್ಗೆ ಅತ್ಯುತ್ಸಾಹ ಕಂಡು ಬರುತ್ತಿದೆ.

ಭೋಜನದ ಗುಣಮಟ್ಟವೂ, ಉತ್ಕೃಷ್ಟತೆಯೂ, ಸಾರ್ವಜನಿಕರ ಶ್ಲಾಘನೆಗೆ ಪಾತ್ರವಾಗಿದೆ. ಈ ವಿಶಿಷ್ಟವಾದ ಅನ್ನದಾನಯೋಜನೆಯ ಸಂತಸಕರ ಫಲವನ್ನು ತಿರುಮಲೆಯ ಬಹುತೇಕ ಯಾತ್ರಿಕರು ಹೊಂದುತ್ತಿದ್ದಾರೆ.

ನಿತ್ಯ ಅನ್ನದಾನ ಯೋಜನೆಯಲ್ಲಿ, ಶ್ರೀ ಸಾಮಾನ್ಯ ಭಕ್ತರೂ ತಮ್ಮ ಯಥಾಶಕ್ತಿ ವಂತಿಗೆಯನ್ನು ಸಲ್ಲಿಸುವುದರ ಮೂಲಕ, ಪಾಲುಗೊಳ್ಳುವಂತೆ ಮಾಡಬೇಕೆಂದು ಯೋಚಿಸಿ, ಈ ವಂತಿಗೆಯ ಮೊತ್ತವನ್ನು ಸಾಕಷ್ಟು ಕಡಿಮೆ ಮಾಡಲು ತಿ. ತಿ. ದೇವಸ್ಥಾನಗಳು ಈಚೆಗೆ ನಿರ್ಧರಿಸಿದೆ. ತಾವು ರೂ. 1000/– ಅಥವಾ ಅದರ ಗುಣಕಗಳಲ್ಲಿ ದಾನ ಮಾಡಿದರೂ ಸಾಕು ; ಉನ್ನತ ಹಾಗೂ ಅರ್ಹವಾದ ಕಾರ್ಯದಲ್ಲಿ ನೆರವು ನೀಡಿದಂತಾಗಿ ಆ ಮೂಲಕ ಕಾಲಾತೀತ ಪರಂಪರೆಯಾದ ಅನ್ನದಾನ ಯೋಜನೆಯನ್ನು ತಿ. ತಿ. ದೇ. ಉಳಿಸಿಕೊಂಡು ಮುಂದುವರೆಯುವಂತೆ ಮಾಡಿದವರಾಗುತ್ತೀರಿ.

ದೂರದೂರುಗಳಿಂದ ತಿರುಮಲೆಗೆ ಆಗಮಿಸುವ ಯಾತ್ರಿಕರ ಬಗ್ಗೆ ತಮ್ಮ ಹೃದಯ ಸಹಾನುಭೂತಿಯಿಂದ ಆರ್ದ್ರವಾಗುವಲ್ಲಿ, ಪರಿಷ್ಕೃತವಾದ ನಿತ್ಯ ಅನ್ನದಾನ ಯೋಜನೆಯಲ್ಲಿ ಸೇರಿ, ಈ ಪವಿತ್ರ ಸೇವೆಯಲ್ಲಿ ಭಾಗಿಗಳಾಗಿರಿ.

ಅನ್ನೇ ಶ್ರಿತಾನಿ ಭೂತಾನಿ ಅನ್ನಂ ಪ್ರಾಣಮಿತಿ ಶ್ರುತಿಃ ।
ತಸ್ಮಾದನ್ನಂ ಪ್ರದಾತವ್ಯಂ ಅನ್ನಂ ಹಿ ಪರಮಂ ಹವಿಃ ॥

ಒಳಶಕ್ತಿಯ ಜೀವಸತ್ತ್ವ ಆಹಾರ ಎಂಬ ವೇದಗಳು ಘೋಷಿಸುತ್ತಿವೆ. ಅನ್ನದಾನ, ಭೌತಿಕ ಗುಣಗಳನ್ನು ಮೀರಿ ನಿಲ್ಲುವ ಅಮೂಲ್ಯ ಕ್ರಮವಾಗಿದೆ. ಹಾಗಾಗಿ ಅನ್ನದಾನ ಮಾಡಬೇಕು. –ಬೋಧಾಯನ ಧರ್ಮಸೂತ್ರ

ವಂದನೆಗಳೊಡನೆ
ತಮ್ಮ ವಿಶ್ವಾಸಿ,
**(ಸಿ. ಎಚ್. ವೆಂಕಟಪತಿರಾಜು.)**

ನೆಲ್ಲೂರು ಜಿಲ್ಲೆಯ ಅಲ್ಲೂರು ಗ್ರಾಮದಲ್ಲಿ ಸ್ಥಳೀಯರು 1.15 ಸೆಂಟ್ ಭೂಮಿಯನ್ನೂ 75 ಸಹಸ್ರ ರೂಗಳನ್ನೂ ನೀಡಿರುವುದರಿಂದ ಅಲ್ಲಿ ತಿ. ತಿ. ದೇ. ಕಲ್ಯಾಣಮಂಟಪವನ್ನು ಹತ್ತು ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಆಡಳಿತಾತ್ಮಕ ಮಂಜೂರಾತಿ ನೀಡಲು ತೀರ್ಮಾನಿಸಲಾಯಿತು.

* ವಿಶಾಖಪಟ್ನಂ ಹಾಗೂ ವಿಜಯನಗರಂಗಳಲ್ಲಿ ತಿ. ತಿ. ದೇ. ಕಲ್ಯಾಣ ಮಂಟಪಗಳನ್ನು ನಿರ್ಮಿಸಲು ತಗುಲುವ ವೆಚ್ಚಗಳ ಅಂದಾಜು ಪತ್ರವನ್ನು ತಿ. ತಿ. ದೇ. ಇಂಜನೀಯರಿಂಗ್ ವಿಭಾಗ ತಯಾರಿಸಿ, ಟೆಂಡರ್‌ಗಳನ್ನು ಕರೆಯಬೇಕೆಂದೂ, ಕಂಟ್ರಾಕ್ಟರ್‌ಗಳೊಂದಿಗೆ ಒಪ್ಪಂದ ಮಾಡಿಕೊಳ್ಳಬೇಕೆಂದೂ ತೀರ್ಮಾನಿಸಲಾಯಿತು. ನಿರ್ಮಾಣ ಕಾರ್ಯದ ಉಸ್ತುವಾರಿಯನ್ನು 'ಹುಡ'ದ ಇಂಜನೀಯರುಗಳು ನೋಡಬೇಕೆಂದು ವಿನಂತಿಸಿಕೊಳ್ಳಲೂ, ತಿ. ತಿ. ದೇ. ಗಳ ಹತ್ತು ಲಕ್ಷರೂಗಳನ್ನು ಹುಡದ ಹೆಸರಲ್ಲಿಟ್ಟು ನಿರ್ಮಾಣ ವೆಚ್ಚಗಳಿಗಾಗಿ ವಿನಿಯೋಗಿಸಬೇಕೆಂದೂ ಅವರನ್ನು ಕೇಳಲು ತೀರ್ಮಾನಿಸಲಾಯಿತು. ಈ ಹಣ ವೆಚ್ಚವಾದನಂತರ ತಿ. ತಿ. ದೇ. ಮತ್ತೆ ಹಣವನ್ನು ಮಂಜೂರು ಮಾಡಬೇಕೆಂದೂ ತೀರ್ಮಾನಿಸಲಾಯಿತು.

* ಕಪಿಲತೀರ್ಥದ ರಸ್ತೆಯಲ್ಲಿರುವ ತೀರ್ಥಂ ನಮ್ಮಾಳ್ವಾರ್ ದೇವಾಲಯದ, ದುರಸ್ತಿ, ಜೀರ್ಣೋದ್ಧಾರದ ಕೆಲಸಗಳನ್ನು ಜಿಯಂಗಾರ್ ಅವರ ಕೋರಿಕೆಯ ಮೇರೆಗೆ 6 ಲಕ್ಷ ರೂಗಳ ಅಂದಾಜು ವೆಚ್ಚದಲ್ಲಿ ಕೈಗೆತ್ತಿಕೊಳ್ಳಬೇಕೆಂದು ತೀರ್ಮಾನಿಸಲಾಯಿತು.

*

